

# ಶ್ರೀವಾಣಿ

ಭಾರತ ಖಂಡದ ಮಹಾದಾರ್ಶನಿಕರು, ಮಂತ್ರದ್ರಷ್ಟಾರರು, ಮನುಷ್ಯನ ಅಂತಿಮಗುರಿಯಾವುದೆಂಬುದನ್ನು ಸಾರಿ ಹೇಳಿದ್ದಾರೆ. ಅದಕ್ಕೆ ಪೂರಕವಾಗಿ ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷಗಳ ಆರ್ಜನೆಯ ವಿಧಿ ವಿಧಾನಗಳನ್ನು ತಿಳಿಸಿದ್ದಾರೆ. ಆ ನಾಲ್ಕರಲ್ಲಿ ಮೊದಲು ಧರ್ಮವನ್ನು ಹೇಳಿರುವ ಉದ್ದೇಶವನ್ನು ಗಮನಿಸಿದಾಗ, ಅವರು ಧರ್ಮಕ್ಕೆ ಕೊಟ್ಟಿರುವ ಪ್ರಾಮುಖ್ಯವೆಷ್ಟೆಂಬದು ಗೊತ್ತಾಗುತ್ತದೆ. ಅದೇನೆಂದರೆ ಧರ್ಮದ ಆಧಾರದ ಮೇಲೆ ಅರ್ಥ ಮತ್ತು ಕಾಮದ ಅಪೇಕ್ಷೆಯಿರಬೇಕೆಂದು. ಆ ಪುಣ್ಯಾತ್ಮರು ವಿಶಾಲವಾದ ಅರ್ಥದಲ್ಲಿ, ವಿವಿಧ ರೀತಿಯಲ್ಲಿ ಧರ್ಮಕ್ಕೆ ವ್ಯಾಖ್ಯಾನವನ್ನು ಕೊಟ್ಟಿದ್ದಾರೆ. "ಪತಿತಂ ಪತಂತಂ, ಪತಿಷ್ಯಂತಂ ವಾ ಯೋ ಉದ್ಧರೇತ್ ಸ ಧರ್ಮಃ" ಬಿದ್ದಿರುವವನನ್ನು, ಬೀಳುತ್ತಿರುವವನನ್ನು, ಬೀಳುವನನ್ನು ಉದ್ಧಾರ ಮಾಡುವುದು ಯಾವುದೋ ಅದೇ ಧರ್ಮ. ಅಂದರೆ ಮನುಷ್ಯತ್ವದಿಂದ ಅಲ್ಪಾಯುವಾದ ಮನುಷ್ಯನು ಅದನ್ನು ಸಂಪಾದಿಸುವುದರಲ್ಲಿ ಸದಾಪ್ರವೃತ್ತನಾಗಬೇಕು. ಅದನ್ನೇ ಪುರಂದರದಾಸರು ಒಂದು ಕಡೆ ಅಪ್ಪಣೆ ಕೊಡಿಸಿದ್ದಾರೆ.

ಕಾಲನದೂತರು ಕಾಲ್ಪಿಡಿದೆಳೆವಾಗ
ತಾಳು ತಾಳೆಂದರೆ ತಾಳುವರೆ
ದಾಳಿಬಾರದ ಮುನ್ನ ಧರ್ಮವಗಳಿಸಿರೊ
ಸುಳ್ಳಿನ ಸಂಸಾರ ಸುರುಳಿಗೆ ಸಿಕ್ಕಬೇಡಿ.

ಆದ್ದರಿರದ ಮಾನವನ ಆತ್ಮೋನ್ನತಿಯಾಗ ಬೇಕಾದರೆ ಧರ್ಮದ ತಳಹದಿಯಿಂದ ಮಾತ್ರ ಸಾಧ್ಯ.

# ‘ಸಿದ್ಧಗಂಗಾ’

ಜೂನ್, ೧೯೭೮

ಸಂಪುಟ–೧೪ ಸಂಚಿಕೆ– ೬



ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಸಂಘದ ಪರವಾಗಿ

ಸಂಪಾದಕ ಮಂಡಲಿ

ಪಂ॥ ಚನ್ನಪ್ಪ ಎರೇಸೀಮೆ
ಪಿ. ಎಸ್. ಚಂದ್ರಶೇಖರಯ್ಯ
ವಿರೂಪಾಕ್ಷಯ್ಯ
ಬಸವರಾಜು

ಜಾಹಿರಾತು ವ್ಯವಸ್ಥಾಪಕರು

ಎಂ. ರೇಣುಕಾರಾಧ್ಯ

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ



ಚಂದಾ ವಿವರ

ಆಜೀವ ಸದಸ್ಯತ್ವ: **151-00** ರೂ

ವಾರ್ಷಿಕ ಚಂದಾ: **10–00** ರೂ


## ಈ ಸಂಚಿಕೆಯಲ್ಲಿ



### ಮುಖಪುಟ

ಪರಮಪೂಜ್ಯ ಶ್ರೀ ಶ್ರೀ ಗಳವರು ತುಮಕೂರಿನಲ್ಲಿ ರಾಜ್ಯಯುವ ಜನ ವಿದ್ಯಾರ್ಥಿ ನಿಲಯಗಳ ಸಮ್ಮೇಳನದ ಅಧ್ಯಕ್ಷತೆ ವಹಿಸಿ ಮಾತನಾಡಿದರು.

### ಲೇಖಕರಲ್ಲಿ ಮನವಿ

‘ಸಿದ್ಧಗಂಗಾ’ ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ ‘ಸಿದ್ಧಗಂಗಾ’ ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

“ಸಂಪಾದಕರು”
“ಸಿದ್ಧಗಂಗಾ” [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ-572131 ತುಮಕೂರು ಜಿಲ್ಲೆ

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ಮನವಿ

ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿ ಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ ‘ಸಿದ್ಧಗಂಗಾ’ ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.


ಪ್ರಕಾಶಕರು
‘ಸಿದ್ಧಗಂಗಾ’ ಮಾಸ ಪತ್ರಿಕೆ, ಸಿದ್ಧಗಂಗಾ ಮಠ–572131 ತುಮಕೂರು ಜಿಲ್ಲೆ


# ನವನೀತ

( ಸಂಸ್ಕೃತ ಶ್ಲೋಕಗಳ ಭಾವಾನುವಾದ )

**ಅನೇಕ ಸಂಶಯೋಚ್ಛೇದಿ ಪರೋಕ್ಷಾರ್ಥಸ್ಯ ದರ್ಶಕಮ್ ।**
**ಸರ್ವಸ್ಯ ಲೋಚನಂ ಶಾಸ್ತ್ರಂ ಯಸ್ಯ ನಾಸ್ತ್ಯಂಧ ಏವ ಸಃ ॥**

ಎನಿತೆನಿತೊ ಸಂಶಯಗಳನ್ನು ಕಳೆದು
ತಿಳಿಸುವುದು ಒಳ ಅರ್ಥವನ್ನು, ಶಾಸ್ತ್ರ
ಎಲ್ಲಕ್ಕೂ ಕಣ್ಣೆನಂತಿಹುದಿದರ ಪಾತ್ರ
ಇಲ್ಲದಿರಲಿದು ನರನು ಕುರುಡ ಮಾತ್ರ

**ಋಣಕರ್ತಾ ಪಿತಾ ಶತ್ರುರ್ಮಾತಾ ಚ ವ್ಯಭಿಚಾರಿಣೀ ।**
**ಭಾರ್ಯಾ ರೂಪವತೀ ಶತ್ರುಃ ಪುತ್ರಃ ಶತ್ರುರಪಂಡಿತಃ ॥**

ಸಾಲಮಾಡಿದ ತಂದೆ ವೈರಿಯು
ಶೀಲಗೆಟ್ಟೊಡೆ ತಾಯಿಯು ಅರಿಯು
ಚೆಲುವೆ ಪತ್ನಿಯು ಕೂಡ ಶತ್ರುವು
ಮೂರ್ಖನಿರೆ ಮಗ ತಾನು ಹಗೆಯು.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**
**ವಕ್ತಾ ದಶ ಸಹಸ್ರೇಷು ದಾತಾ ಭವತಿ ವಾ ನವಾ ॥**

ಜನಿಸುವನು ನೂರರೊಳಗೊಬ್ಬ ಶೂರ
ಅಂತೆಯೇ ಸಾವಿರಕ್ಕೊಬ್ಬ ಪ್ರಾಜ್ಞ
ಸಂತನಾದರೊ ಹತ್ತು ಸಾವಿರಕ್ಕೊಬ್ಬ
ಇಂತಿರಲು ದಾನಿ ತಾನಿಹನೊ? ಇರನೊ?

—‘ಕಾವ್ಯಸುಧಾಪ್ರಿಯ’

## ಅಮೃತ ಬಿಂದು

‘ಪೃಥಿವ್ಯಾಂ ತ್ರೀಣಿ ರತ್ನಾನಿ ಜಲಂ ಅನ್ನಂ ಸುಭಾಷಿತಂ’ ಪೃಥ್ವಿಯಲ್ಲಿ ನೀರು, ಅನ್ನ ಮತ್ತು ಒಳ್ಳೆಯ ಮಾತು ಇವು ಅತ್ಯಂತ ಬೆಲೆ ಬಾಳುವ ಅಮೂಲ್ಯ ರತ್ನಗಳು ಎನ್ನುತ್ತದೆ ಒಂದು ಸೂಕ್ತಿ. ಸದ್ಯದಲ್ಲಿ ಅನ್ನದ ವಿಚಾರವನ್ನು ತೆಗೆದುಕೊಂಡಾಗ, ಅದು ಎಲ್ಲ ಪ್ರಾಣಿಗಳಿಗೂ ಜೀವನಾವಶ್ಯಕ ವಸ್ತು. ಅಂತೆಯೇ ಚೈತನ್ಯದಾಯಕವೂ ಹೌದು. ಅನ್ನ ಕೇವಲ ಜೀವನಾವಶ್ಯಕ ವಸ್ತುವೇ ಆಗಿರದೆ ಅದು ಚರಾಚರ ಜಗತ್ತಿಗೂ ಚೈತನ್ಯದಾಯಕವಾದ ಪರಾತ್ಪರ ವಸ್ತು. ಇದನ್ನೇ ಉಪನಿಷತ್ತು ಸಾವಿರಾರು ವರ್ಷಗಳಿಂದಲೂ ಸಾರುತ್ತಾ ಬಂದಿದೆ ಅನ್ನಂ ಬ್ರಹ್ಮೇತಿ ವ್ಯಜನಾತ್’ಎಂದು ಸೃಷ್ಟಿಸ್ಥಿತಿ ಲಯಗಳಿಗೆಅನ್ನವೇ ಕಾರಣವೆನ್ನುತ್ತದೆ. ಹಾಗೆಯೇ ಮುಂದುವರೆದು ‘ಅನ್ನಂ ನ ನಿಂದ್ಯಾತ್’ ಎನ್ನುತ್ತದೆ. ಆದ್ದರಿಂದ ಅನ್ನವನ್ನು, ವ್ಯರ್ಥವಾಗಿ ಹಾಳುಮಾಡದೆ, ಪ್ರತಿಯೊಂದು ಹಾಲಿನ ಬಿಂದುವಿನಲ್ಲಿಯೂ ತುಪ್ಪದ ಅಂಶವಿರುವಂತೆ ಒಂದೊಂದು ಅನ್ನದ ಅಗುಳಿನಲ್ಲಿಯೂ ಪರಮಾತ್ಮನಿದ್ದಾನೆ ಮತ್ತು ಅದು ಪರಮಾತ್ಮನೇ ಆಗಿದೆ ಎಂಬ ಸದ್ಭಾವನೆಯಿಂದ ಅನ್ನವನ್ನು ಸೇವಿಸಬೇಕು. ಈ ಮಾತನ್ನೇ ಪುಷ್ಟೀಕರಿಸುತ್ತದೆ. ಸರ್ವಜ್ಞನ ‘ಅನ್ನ ದೇವರ ಮುಂದೆ ಇನ್ನು ದೇವದೇವರುಂಟೆ’ ಎನ್ನುವ ಮಾತು.

—‘ದುಂಬಿ’

# ಶ್ರೀ ಅರವಿಂದರು

—ತಿಪ್ಪೇಸ್ವಾಮಿ

ಮಾನವೀಯ ಪ್ರಜ್ಞೆಯನ್ನು ಅತಿ ಉನ್ನತವಾದ ದೈವೀಪ್ರಜ್ಞೆಯೊಡನೆ ಮಿಳಿತಗೊಳಿಸುವುದೇ ಪೂರ್ಣಯೋಗದ ಗುರಿ. ಈ ಗುರಿ ಸಾಧನೆಯಲ್ಲಿ ಯಶಸ್ವಿಯಾದವರು ಇಡಿ ವಿಶ್ವದಲ್ಲೇ ಅತಿ ಮಾನವರೆಂದು ಪ್ರಸಿದ್ಧರಾದ ಶ್ರೀ ಅರವಿಂದರು.

ಶ್ರೀ ಅರವಿಂದರದು ಒಂದು ವಿಶಿಷ್ಟವಾದ ವ್ಯಕ್ತಿತ್ವ. ಪ್ರಿನ್ಸಿಪಾಲರಾಗಿ, ಪತ್ರಿಕಾ ಸಂಪಾದಕರಾಗಿ, ಸ್ವಾತಂತ್ರ ಆಂದೋಲನದ ಮಾರ್ಗದರ್ಶಕರಾಗಿ, ಕಾಂಗ್ರೆಸ್ ಚಳುವಳಿಯ ನಾಯಕರಾಗಿ, ಜೈಲುವಾಸ ಅನುಭವಿಸಿ ಕೊನೆಗೆ ಪಾಂಡಿಚೆರಿಯಲ್ಲಿ ನೆಲಸಿ ಮಹಾಯೋಗಿಗಳೆನಿಸಿಕೊಂಡರು. ಇಡೀ ವಿಶ್ವದಲ್ಲೇ ಅತಿಮಾನವರೆಂದೂ, ಪ್ರಚಂಡ ಮೇಧಾವಿಗಳೆಂದೂ ಅವತಾರ ಪುರುಷರೆಂದೂ ಕವಿಗಳೆಂದೂ ಪ್ರಸಿದ್ಧರಾದರು.

ಇಂತಹ ಮಹಾವ್ಯಕ್ತಿತ್ವದ ಆವಿರ್ಭಾವಕ್ಕೆ ಅಡಿಪಾಯಿ ತಂದೆ ತಾಯಿಯರೆಂದು ನಾವು ಊಹಿಸಬಹುದು. ಆದರೆ ಅರವಿಂದರ ಹಿನ್ನೆಲೆ ಇದಕ್ಕೆ ತದ್ವಿರುದ್ಧ, ಅವರ ತಂದೆ ಕೃಷ್ಣಧನ ಘೋಷರು ನಾಸ್ತಿಕರಾಗಿದ್ದರು. ಅಲ್ಲದೆ ವಿಲಾಸಿಗಳೂ ಐರೋಪ್ಯ ಸಂಸ್ಕೃತಿಯ ಅಭಿಮಾನಿಗಳೂ ಆಗಿದ್ದರು. ಆದರೆ ಇವರಿಗೆ ಬಡವರನ್ನು ಕಂಡರೆ ಬಹಳ ಪ್ರೀತಿ. ಒಂದೊಂದುಬಾರಿ ಕೈಲ್ಲಿದ್ದುದನ್ನೆಲ್ಲ ದಾನಮಾಡಿ ಬರಿಗೈಯಾಗುತ್ತಿದ್ದುದೂ ಉಂಟು.

ಅರವಿಂದರ ಜನನ 1872 ಅಗಸ್ಟ್ ಹದಿನೈದರಂದು ಆಯಿತು. ಐರೋಪ್ಯ ಸಂಸ್ಕೃತಿಯ ಅಭಿಮಾನಿಗಳಾದ ಅವರ ತಂದೆ ತಮ್ಮ ಮಕ್ಕಳನ್ನು ವಿದ್ಯಾಭ್ಯಾಸಕ್ಕಾಗಿ ಹೊರದೇಶಕ್ಕೆ ಕಳುಹಿಸಿದರು. ಆದುದರಿಂದ ಅರವಿಂದರ ವಿಧ್ಯಾಭ್ಯಾಸ ಬಾಲ್ಯದ ಎರಡು ವರ್ಷ ಡಾರ್ಜಲಿಂಗಿನಲ್ಲೂ ನಂತರ ಹದಿನಾಲ್ಕು ತುಂಬುವವರಿಗೆ ಇಂಗ್ಲೆಂಡಿನಲ್ಲೂ ನಡೆಯಿತು. ಅವರು ಇಂಗ್ಲೀಷ್, ಲ್ಯಾಟಿನ್ ಫ್ರೆಂಚ್, ಗ್ರೀಕ್, ಮರಾಠಿ, ಗುಜರಾಥಿ ಇನ್ನಿತರ ಭಾಷೆಗಳಲ್ಲಿ ಪ್ರಭುತ್ವ ಸಂಪಾದಿಸಿದ್ದರು. ಅರವಿಂದರು ಅಂತಹ ವಾಗ್ಮಿಗಳೇನಲ್ಲ. ಯಾವ ಹಾವಾಭಾವಗಳಿಲ್ಲದ ಶಾಂತವಾದ ಅವರ ಗಂಭೀರವಾಣಿ ಸಭೆಗಳಲ್ಲಿ ಶ್ರೋತೃಗಳನ್ನು ತನ್ಮಯರನ್ನಾಗಿಸಿ ಶಾಂತವಾತವರಣವನ್ನು ಉಂಟುಮಾಡುತ್ತಿತ್ತು.

ಕಪ್ಪು ಬಣ್ಣದ ಕೋಮಲವಾದ ಮೈಯಿ, ತೇಲುಗಣ್ಣುಗಳು ತಲೆಯ ಮಧ್ಯದಲ್ಲಿ ಬೈತಲೆ, ಉದ್ದ ಕೂದಲು, ಬಿಗಿಯಾದ ಧೋತರ, ಅಂಗಿ, ಕಾಲುಗಳಿಗೆ ಹಳೆಯದಾದ ಚಪ್ಪಲಿ' ಮುಖದಲ್ಲಿ ಅಲ್ಲಲ್ಲಿ ಮೈಲಿಗೆಯ ಕಲೆಗಳು, ಇಂತಹ ವ್ಯಕ್ತಿಯನ್ನು ಮೊದಲಬಾರಿಗೆ ನೋಡಿದರೆ ಈತನೇ ಫ್ರೆಂಚ್, ಲ್ಯಾಟಿನ್‌ಗಳಂತಹ ಭಾಷೆಗಳಲ್ಲಿ ಮಹಾ ಪಂಡಿತನಾದ ಅರವಿಂದರೆಂದು ಊಹಿಸಲೂ ಸಾಧ್ಯವಿಲ್ಲ ಅವರೆಂದೂ ಆಡಂಬರದ ವ್ಯಕ್ತಿಯಾಗಿರಲಿಲ್ಲ. ಹೇಡಿತನ, ಕ್ಷುಲ್ಲಕತನಗಳು ಅವರ ಬಳಿ ಸುಳಿಯುತ್ತಿರಲಿಲ್ಲ. ಮನಸ್ಸಿನಲ್ಲಿ ದುರಹಂಕಾರವೆಂಬುದು ಒಂದಿಷ್ಟೂ ಇರಲಿಲ್ಲ.

ಮೃಣಾಲಿನಿಯವರೊಡನೆ ಅರವಿಂದರ ವಿವಾಹವೇನೋ ನಡೆಯಿತು. ಆದರೆ ವಿವಾಹವಾಗಿ ಒಂದು ವರ್ಷವಾಗುವುದರೊಳಗೆ ಅವರು ಬ್ರಹ್ಮಚರ್ಯ ವ್ರತ ಸ್ವೀಕರಿಸಿದರು, ಅವರಿಗೆ ಆಗಾಗ್ಗೆ ಆಧ್ಯಾತ್ಮಿಕ ಜೀವನದ ಬಗ್ಗೆ ಪತ್ರಗಳನ್ನು ಬರೆಯುತ್ತಿದ್ದರು.

ಅರವಿಂದರು ಸ್ವಾತಂತ್ರ ಸಂಗ್ರಾಮದಲ್ಲಿ ಧುಮುಕಿ ಬಂಗಾಳದ ಉದ್ದಗಲಕ್ಕೂ ಪ್ರವಾಸ ಮಾಡಿದರು. ಕಾಲೇಜಿನ ಹುದ್ದೆ ಬಿಟ್ಟು ಬಿಪಿನಚಂದ್ರ ಪಾಲರಿಂದ ಸ್ಥಾಪಿತವಾದ "ವಂದೇ ಮಾತರಂ" ಪತ್ರಿಕೆಯ ಸಂಪಾದಕರಾಗಿ ದುಡಿದರು. 'ವಂದೇ ಮಾತರಂ' ನಲ್ಲಿ ಬರೆಯುತ್ತಿದ್ದ ಅವರ ಲೇಖನಗಳು ಜನರಲ್ಲಿ ದೇಶಾಭಿಮಾನವನ್ನೂ ಸ್ವಾತಂತ್ರ ಪ್ರಿಯತೆಯನ್ನು ಉಜ್ವಲಗೊಳಿಸುತಿದ್ದವು. ಇವೆಲ್ಲವುಗಳ ಜೊತೆಗೇ ಅವರ ಯೋಗಾಧ್ಯಾಯನವೂ ನಡೆಯುತ್ತಿತ್ತು. ಯೋಗಾಭ್ಯಾಸದ ಗುರಿ ತಾವು ಪಾರಮಾರ್ಥಿಕ ಸಿದ್ಧಿ ಪಡೆಯುವುದಾಗಿರಲಿಲ್ಲ. ದೇಶವನ್ನು ಸ್ವಾತಂತ್ರ್ಯಗೊಳಿಸುವುದೇ ಆಗಿತ್ತು. "ತಪಸ್ಸಿನಿಂದ ಮುಕ್ತಿ ಪಡೆಯುವುದು ಸಾಧ್ಯವಿರುವುದಾದರೆ ಅದೇ ತಪಸ್ಸಿನ ಶಕ್ತಿಯಿಂದ ದೇಶವನ್ನು ಸ್ವಾತಂತ್ರ್ಯ ಗೊಳಿಸುವುದು ಸಾಧ್ಯವಿಲ್ಲವೇ ?" ಎಂಬುದು ಅವರ ನಿಲುವಾಗಿತ್ತು.

ಅರವಿಂದರು ಆಲಿಪುರದ ಅರಮನೆಯಲ್ಲಿದ್ದಾಗ ಅವರಿಗೆ ವಾಸುದೇವನ ದರ್ಶನವಾಯಿತು. ಈ ಸಾಕ್ಷಾತ್ಕಾರ ಅವರನ್ನು ರಾಜಕೀಯದಿಂದ ಪೂರ್ವಾಯೋಗದೆಡೆಗೆ ತಿರುಗಿಸಿತು. ಫ್ರೆಂಚರ ಅಧೀನದಲ್ಲಿದ್ದ ಚಂದ್ರನಗರಕ್ಕೆ ಹೋದರು. ನಂತರ ಪಾಂಡಚರಿಯನ್ನು ಸೇರಿದರು. ಅಲ್ಲೇ ಉಳಿಯುವ ಯೋಚನೆ ಅವರಿಗಿರಲಿಲ್ಲ ಆದರೆ ಅನೇಕ ಅಡೆತಡೆಗಳಿಂದ ಪಾಂಡಿಚೆರಿಯನ್ನು ಬಿಡಲಾಗಲಿಲ್ಲ.

ಅರವಿಂದರ ಆರ್ಥಿಕಪರಿಸ್ಥಿತಿ ತುಂಬಾ ತೊಂದರೆಯಿಂದ ಕೂಡಿತ್ತು. ಅವರಿಗೆ ಬೇಕಾದ ಧನಸಹಾಯವು ಸರಿಯಾದ ಕಾಲಕ್ಕೆ ಒದಗುತ್ತಿರಲಿಲ್ಲ. ಮನೆಯಲ್ಲಿ ಒಂದು ಮೇಜು ಎರಡು ಕುರ್ಚಿಗಳು ಇರುತ್ತಿದ್ದವು. ಒಂದು ಕೂತು ಬರೆಯಲು ಮತ್ತೊಂದು ಅತಿಥಿಗಳಿಗಾಗಿ ಒಂದೇ ಒಂದು ಟೇಬಲ್ಲು ಇರುತ್ತಿತ್ತು. ಇಂತಹ ಪರಿಸ್ಥಿತಿಗಳು ಅವರನ್ನು ಧೃತಿಗೆಡಿಸುತ್ತಿರಲಿಲ್ಲ.

"ನನ್ನ ಯೋಗವು ಎಲ್ಲ ಅಂತಗಳಲ್ಲೂ ಸಂಪೂರ್ಣ ನವೀನವಾಗಿದೆ ಎಂದು ನಾನು ಹೇಳುವುದಿಲ್ಲ. ಅದನ್ನು ಪೂರ್ಣಯೋಗವೆಂದು ಮಾತ್ರಕರೆದಿದ್ದೇನೆ. ಅದರಲ್ಲಿ ಪುರಾತನ ಯೋಗಗಳ ಮೂಲ ತತ್ವಗಳೂ ಹಾಗೂ ಸಾಧನಾಕ್ರಮಗಳೂ ಅಡಕವಾಗಿವೆ ಅಂದರೆ ಅದರ ಹೊಸತನ ಜೀವನದ ಪರಿಪೂರ್ಣತೆಯಲ್ಲಿದೆ" ಎಂದು ಅವರು ಸಾರಿದರು.

ಮಾನವೀ ಪ್ರಜ್ಞೆಯನ್ನು ಅತಿ ಉನ್ನತವಾದ, ವಿಶಾಲವಾದ ದೈವೀ ಪ್ರಜ್ಞೆಯೊಡನೆ ಮಿಳಿತಗೊಳಿಸುವುದು. ಬೆಳೆಸುವುದೇ ಪೂರ್ಣಯೋಗದ ಗುರಿ.

ಶ್ರದ್ಧೆ ಸಾಧಕನಿಗಿರಬೇಕಾದ ಮುಖ್ಯಗುಣ ಯೋಗದಲ್ಲಿ ಸಮರ್ಪಣೆಗೆ ಬಲು ದೊಡ್ಡ ಬೆಲೆ ಇದೆ ಸಮರ್ಪಣೆಯೆಂದರೆ ತನ್ನದೆಲ್ಲವನ್ನೂ ಪರಮಾತ್ಮನಿಗೆ ಅರ್ಪಿಸುವುದು. ಸಾಧಕನಿಗೆ ಬೇಕಾದ ಮತ್ತೊಂದು ಗುಣ "ಜಾಗರೂಕತೆ" ಅವನು ಶಾಂತ ಚಿತ್ತನಾಗಿರಬೇಕು. ಸಿದ್ಧಿಯು ಗುರುಸನ್ನಿದಿಯಲ್ಲಿ ದೊರೆತರೆ ಉತ್ತಮ ಅದು ದೊರೆಯದಿದ್ದರೆ ಸಾಧಕ ಒಂದು ಆಧ್ಯಾತ್ಮಿಕ ಪರಿಸರವನ್ನು ನಿರ್ಮಿಸಿಕೊಂಡು ಅದರಲ್ಲಿರಬೇಕು

ಅವರ ಕೊನೆಯದಿನದ ರಹಸ್ಯ ಅವರಿಗೆ ತಿಳಿದಿದ್ದಂತೆ ತೋರುತ್ತಿತು. "ಸಾವಿತ್ರಿ" ಮಹಾಕಾವ್ಯವನ್ನು ಮುಕ್ತಾಯಗೊಳಿಸಿ, ಭಕ್ತರಿಗೆ ದರ್ಶನನೀಡಿ, ಶಾಲೆಯ ವಾರ್ಷಿಕೋತ್ಸವದಲ್ಲಿ ಭಾಗವಹಿಸಿ ವಿಶ್ರಾಂತಿಗೆ ತೆರಳಿದರು.

ಒಂದು ಘಂಟೆಯ ನಂತರ ಕುರ್ಚಿಯಿಂದೆದ್ದು ತಮ್ಮ ಹಾಸಿಗೆಯ ಕಡೆಗೆ ಬಂದರು. ಎಡವಿಬಿದ್ದಿದ್ದರಿಂದ ಉಂಟಾಗಿದ್ದ ಕಾಲುನೂವು ಮತ್ತೆ ಕಾಣಿಸಿಕೊಂಡಿತು. ಒಂದು ಘಂಟೆಯ ಅವಧಿಯಲ್ಲಿ ಸಂಪೂರ್ಣ ಬಳಲಿದ್ದರು. ಸ್ವರ್ಗಸ್ಥರಾಗುವ ಅರ್ಧ ಘಂಟೆ ಮೊದಲು ಸ್ವಲ್ಪ ನೀರು ಕುಡಿದರು. ಅಂತಃಕರಣಾಪೂರಿತ ದೃಷ್ಟಿಯಿಂದ ಸೇವೆಸಲ್ಲಿಸಿದವರನ್ನು ನೋಡಿ ಕಣ್ಣು ಮುಚ್ಚಿದರು—

---

★ ಬಸವ ಸಾರಿದನಂದು ಕುಶಲದಲಿ ವಚನಗಳ
★ ಮುಸುಕಿರುಳ ಹರಿದು ನಸುಕಾತು ಜಗದೊಳಗೆ
★ ಹೊಸ ಮತದ ಸೂರ್ಯ ನುಡಿಸಿದನು.

—ಜಾನಪದ ಕವಿ.

# ಸರ್ವಜ್ಞನು ವೀರಶೈವನಲ್ಲವೆ?

—ಎಸ್. ಎಸ್. ಭೂಸರೆಡ್ಡಿ

"ಸರ್ವಜ್ಞ ಕವಿಯು ಅಚ್ಚನಿಚ್ಚ ಪ್ರಸಿದ್ಧ ವೀರಶೈವ ಕವಿಯಾಗಿದ್ದರೂ ಜಿ. ವೆಂಕಟಸುಬ್ಬಯ್ಯನವರ ಸಂದೇಹವು ನಿರಾಧರವೆಂದು ಲೇಖಕರು ವಿಶದೀಕರಿಸಿದ್ದಾರೆ. ಈ ಬಗ್ಗೆ ಶ್ರೀಯುತರು ಈಗಾಗಲೇ ಒಂದು ಪುಸ್ತಕವನ್ನು ಬರೆದು ಪ್ರಕಟಿಸಿದ್ದಾರೆ

ಇತ್ತೀಚೆ ಮೈಸೂರ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಪರವಾಗಿ ಸರ್ವಜ್ಞನ ನಾಲ್ಕು ನೂರನೆಯ ಉತ್ಸವದ ಸವಿನೆನಪಿಗೆಂದು 'ಸರ್ವಜ್ಞ' ಕೃತಿಹೊರ ಬಂದಿದೆ. ಅದರಲ್ಲಿ ಜಿ. ವೆಂಕಟಸುಬ್ಬಯ್ಯನವರ ಸಮಸ್ಯೆಗಳ ಕವಿ ಎಂಬ ಶೀರ್ಷಿಕೆಯ ಲೇಖನ ಬಂದಿದೆ. ಅದರ ಕೆಲ ಅಂಶಗಳಿವು. "ಸರ್ವಜ್ಞನು ವೀರಶೈವನೇ ಅಲ್ಲವೇ ಎಂಬ ಬಗ್ಗೆಯೂ ನಿಷ್ಕೃಷ್ಟವಾದ ಅಭಿಪ್ರಾಯವಿಲ್ಲ. ವೀರಶೈವ ಸಿದ್ಧಾಂತಕ್ಕೆ ಸಂಬಂಧಪಟ್ಟ ಯಾವೊಂದು ಪ್ರತಿಕ್ರಿಯೆಯನ್ನೂ ಸರ್ವಜ್ಞ ಪದಗಳು ಖಚಿತವಾಗಿ ನಿರೂಪಿಸುವುದಿಲ್ಲ. ಅಲ್ಲದೆ ಲಿಂಗಾಯತ ಮತಕ್ಕೆ ಸಂಬಂಧಪಟ್ಟಂತೆ ಬರುವ ಕೆಲವು ಪದ್ಯಗಳು ಪ್ರಕ್ಷಿಪ್ತ ಪದ್ಯಗಳಂತೆಯೇ ಕಂಡು ಬರುತ್ತವೆ. ಅದುದರಿಂದ ಇನ್ನಿಷ್ಟು ಸ್ಪಷ್ಟವಾದ ಪೋಷಕಾಂಶಗಳು ದೊರೆಯುವವಗೆ ಸರ್ವಜ್ಞನ ಮತದ ಬಗ್ಗೆಯೂ ಅನಿರ್ಧಾರಿತ ಸ್ಥಿತಿಯೇ ಸರಿಯೆನಿಸುತ್ತದೆ. (ಪು-100)" ಮುಂದಿನ ಕೆಲವಿಚಾರಗಳನ್ನು ಇಲ್ಲಿ ಎತ್ತಿ ಹೇಳಬೇಕೆನಿಸುತ್ತದೆ. "ವಚನಕಾರರಿಂದ ಸರ್ವಜ್ಞನು ನೇರವಾಗಿ ಪ್ರಭಾವಿತನಾಗಿದ್ದಾನೆ. ಅದರೂ ತೆಲಗಿನ ವೇಮನನಿಗೂ, ಉತ್ತರ ಭಾರತದ ಕಬೀರನಿಗೂ ಹೋಲಿಸುತ್ತಾರೆ. ಈ ಮೂವರೂ ಬಿಡಿ ಬಿಡಿಯಾದ ಮುಕ್ತಗಳನ್ನು ಬರೆದರೆಂಬ ದೃಷ್ಟಿಯಿಂದ ಈ ಹೋಲಿಕೆ ಹೊಂದುತ್ತದೆ........ಅದರೆ ತಿರುವಳ್ಳುವರೆ ಕವಿಯಲ್ಲಿ ಇರುವ ಪಾರಮಾರ್ಥಿಕ ವ್ಯಕ್ತಿತ್ವ ಸರ್ವಜ್ಞನಲಿಲ್ಲ. ಕಬೀರನಂತಹ ಭಕ್ತಮನೋಭಾವ, ಶರಣಾಗತಿ ಸರ್ವಜ್ಞನಲಿಲ್ಲ. ವೇಮನಂತಹ ನೀತಿಭೋಧೆ ಸಾಮಾಜಿಕ ವಿಡಂಬಣೆ ಇದೆ" ಎಂದು ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಈ ಬಗೆಗೆ ಸಾಹಿತ್ಯ ಸಂಶೋಧಕರು ಇವರ ವಿಚಾರಗಳನ್ನು ಪುನರಾಲೋಕನ ದೃಷ್ಟಿಯಿಂದ ವಿವೇಚಿಸುವುದು. ಅತ್ಯವಶ್ಯವಾಗಿದೆಯೆಂದೆನಿಸುತ್ತದೆ.

ಅವರ ಮೊದಲಿನ ವಾದವಂತೂ ಬಹುವಿಚಿತ್ರ; ಸೋಜಿಗ. ಸರ್ವಜ್ಞ ವೀರಶೈವ ಕವಿಯೆಂದು ಜಗಜ್ಜಾಹೀರವಾಗಿದೆ; ಸರ್ವಸಮ್ಮತವಾದ ರೀತಿಯಲ್ಲಿ ಪ್ರಖ್ಯಾತ ಸಾಹಿತ್ಯಜ್ಞರಿಂದ ಒಪ್ಪಿಕೊಂಡದ್ದಾಗಿದೆ. ಈಗಾಗಲೇ ಚರ್ವಿತಚರ್ವಣವಾಗಿ ನಿರ್ಧಾರಿತ ವಿಷಯವನ್ನು ಯಾವ ಸಬಲವಾದ ಖಚಿತವಾದ ಆಧಾರಗಳಿಲ್ಲದೆ ಏಕಾಏಕಿ ಸರ್ವಜ್ಞನು ವೀರಶೈವನೇ, ಅಲ್ಲವೇ ಎಂಬ ಸಂಶಯದ ಸುಳುಹು ತೋರಿಸಿದ ಜಿ. ವೆಂಕಟಸುಬ್ಬಯ್ಯನವರ ವಿಚಾರ ಲಹರಿ ತರ್ಕಬದ್ಧವಾಗಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ಈಗಾಗಲೇ ಸರ್ವಜ್ಞನ ಮತದ ಬಗೆಗೆ ಸಮಗ್ರವಾಗಿ ಪರಿಶೀಲಿಸಿ ನಿರ್ಣಯಿಸಿದ ಪ್ರಖ್ಯಾತ ಸಾಹಿತಿಗಳ ಕೆಲವು ವಿಚಾರಗಳನ್ನು ಓದುಗರು ಗಮನಿಸಬಹುದು.

1868ರಲ್ಲಿ ರೆವರೆಂಡ ಜಿ. ವರ್ಥರು ಮದ್ರಾಸ ಸರಕಾರದ ಪರವಾಗಿ ಪ್ರಾಕ್ಕಾವ್ಯಮಾಲಿಕೆಯೆಂಬ ಕಾವ್ಯ ಸಂಕಲನವನ್ನು ಸಂಗ್ರಹಿಸಿದ್ದಾರೆ. ಅದರಲ್ಲಿಯ ನಾಲ್ಕು ವಿಭಾಗಗಳಲ್ಲಿ ವೀರಶೈವ ಸಾಹಿತ್ಯ ವಿಭಾಗವು ಒಂದಾಗಿದೆ. ಈ ಭಾಗದಲ್ಲಿಯೇ ಸರ್ವಜ್ಞನ 350 ವಚನಗಳು ಪ್ರಕಟವಾಗಿವೆ. ವರ್ಥರ ಮುನ್ನುಡಿಯಲ್ಲಿಯ ಮಾತುಗಳಿವು "....ಅವನು ಲಿಂಗದೀಕ್ಷೆ ಮಾಡಿಕೊಂಡು ಲಿಂಗವಂತರೊಳಗೆ ಕೂಡಿದ ಹಾಗೆ ಕಾಣುತ್ತದೆ.

ಆರ್. ನರಸಿಂಹಾಚಾರ್ಯರ ಕರ್ನಾಟಕ ಕವಿ ಚರಿತ್ರೆ ಪುಟ (498) ಭಾಗ-2 -1973 (ತಿದ್ದಿದ ಎರಡನೆಯ ಅವೃತ್ತಿ)ಯಲ್ಲಿ ಉಲ್ಲೇಖಗೊಂಡ ಭಾಗವಿದು. "....ಈತನು ತ್ರಿಪದಿ ರೂಪದಾದ ಒಂದು ಗ್ರಂಥವನ್ನು ಬರೆ



ದಿದ್ದಾನೆ. ಇವಕ್ಕೆ ಸರ್ವಜ್ಞನ ತ್ರಿಪದಿ ಎಂದು ಹೆಸರು. ಇವನು ವೀರಶೈವ ಕವಿ. (ಈ ಕೃತಿಯ ಪರಿಷ್ಕರಣೆಯಲ್ಲಿ ಜಿ. ವೆಂಕಟಸುಬ್ಬಯ್ಯನವರು ತುಂಬಾ ಶ್ರಮುವಹಿಸಿದ್ದಾರೆಂದು ಬರೆಯಲಾಗಿದೆ.)

ಕೆ. ವೆಂಕಟರಾಮಪ್ಪನವರು ಕನ್ನಡ ಸಾಹಿತ್ಯವೆಂಬ ಕಿರು ಕೃತಿ (ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟನೆ-1961)ಯಲ್ಲಿ 62ನೆಯ ಪುಟದಲ್ಲಿ "ಸರ್ವಜ್ಞನು ಶಿವಭಕ್ತನೆಂದೂ ಬಸವ ಪಂಥದವನೆಂದೂ ತಿಳಿಯುತ್ತಿದೆ." ಎಂದಿರುವುದನ್ನು ಇಲ್ಲಿ ಸ್ಮರಿಸಬಹುದು.

ಡಾ॥ ಎಚ್. ತಿಪ್ಪೇರುದ್ರಸ್ವಾಮಿಯವರು ಕೇಂದ್ರ ಸಾಹಿತ್ಯ ಅಕ್ಯಾಡೆಮಿ ಬಹುಮಾನ ಪಡೆದ ತಮ್ಮ ಕರ್ನಾಟಕ ಸಂಸ್ಕೃತಿ ಸಮೀಕ್ಷೆಯಲ್ಲಿ "ಸರ್ವಜ್ಞ ನೆಲೆಯಾಗಿ ಒಂದು ಕಡೆ ನಿಂತ ಸಂಸಾರಿಯಲ್ಲ.... ಜನ್ಮದಿಂದ ವೀರಶೈವ, ಬೆಳೆದದ್ದು ವಿಶ್ವವ್ಯಕ್ತಿಯಾಗಿ, ಸಂಸಾರಕ್ಕೆ ಅತೀತವಾದ ಯೋಗಿಯ ನಿರ್ಲಿಪ್ತತೆ ಆತನ ವಚನಗಳಲ್ಲಿ ಮೈವೆತ್ತಿ ನಿಂತಿದೆ" ಎಂದು ಬರೆದಿದ್ದಾರೆ. ಇನ್ನು ಡಾ॥ ಆರ್ ಸಿ. ಹಿರೇಮಠರು "ಸರ್ವಜ್ಞನು ವೀರಶೈವನಾಗಿ ಜನಿಸಿ ಷಟಸ್ಥಲ ಸಿದ್ಧಾಂತವನ್ನು ಜೀವಿಸಿ ಶರಣ ಪರಂಪರೆಯಲ್ಲಿ ಬಾಳಿ ಬದುಕಿದವನು". ಆತನ ವಚನಗಳಲ್ಲಿ ಆ ಸಿದ್ಧಾಂತವಿರುವುದನ್ನು ಗಮನಿಸಿ 16ನೇಯ ಶತಮಾನದ ವಚನ ಸಾಹಿತ್ಯ ಸಂಕಲನಕಾರರು ಮಿಕ್ಕಿ ಶರಣರ ವಚನಗಳಂತೆ ಸರ್ವಜ್ಞನ ತ್ರಿವಿಧಿಗಳನ್ನು ಷಟಸ್ಥಲ ಪ್ರಕಾರಗಳಲ್ಲಿ ಸಂಗ್ರಹಿಸಿರುವರು. (ಸರ್ವಜ್ಞ ಕವಿ; ಜೀವನ, ಕಾವ್ಯ ಪು. 35. ಕ.ವಿ.ವಿ. ಪ್ರಕಟನೆ —1967) ಎಂದು ತಮ್ಮ ನಿಲುಮೆಯನ್ನು ಸ್ಪಷ್ಟಪಡಿಸಿದ್ದಾರೆ.

ಇನ್ನು ಜಿ. ವೆಂಕಟಸುಬ್ಬಯ್ಯನವರು ಲೇಖನ ಬರೆದ ಗ್ರಂಥದಲ್ಲಿಯೇ ಡಾ॥ಆರ್ವಿಯಸ್ ಸುಂದರಂ ಅವರು "ಸರ್ವಜ್ಞ ಮತ್ತು ವೇಮನ, ವಿಷಯವಾಗಿ ಲೇಖನ ಬರೆದಿದ್ದಾರೆ. ಅವರು ಸರ್ವಜ್ಞನ ಮತದ ವಿಷಯವಾಗಿ ಪ್ರಸ್ತಾಪ ಮಾಡಿದ್ದಾರೆ. ಅವರು ಸೂರ್ಯ ಪ್ರಕಾಶನಷ್ಟು ಸ್ಪಷ್ಟವಾಗಿ ಹೀಗೆ ಬರೆದಿರುವುದು ಗಮನಾರ್ಹ; "ಅವನ (ಸರ್ವಜ್ಞ) ಮತ ವಿಷಯವಾಗಿ ಮಾತ್ರ ವಿವಾದಗಳು ಇಲ್ಲದಿರುವುದು ಸಂತೋಷದ ಸಂಗತಿ [ಪು. 49"] ಆದರೆ ಜಿ.ವೆಂಕಟಸುಬ್ಬಯ್ಯನವರ ವಿಪರ್ಯಾಸದ ವಿಪರೀತ ಹೇಳಿಕೆ ನೀಡಿರುವುದು ಆಶಂತೋಷದ ಅಪಸ್ವರ ಎತ್ತಿರುವುದು ನಿಶ್ಚಿತವಾಗಿ ನಿರ್ಣೀತವಾದ ವಿಷಯದಲ್ಲಿ ಇನ್ನಿಲ್ಲದ ಗದ್ದಲ ಎಬ್ಬಿಸಿದಂತಾಗಿದೆ; ಇದೀಗ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದವರು "ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ"ಯ ಸಂಪುಟಗಳಲ್ಲಿ ಇದು ವಾದಗ್ರಸ್ತ ವಿಷಯವಾಗಲೆಂಬ ಉದ್ದೇಶ ವಿರಬಹುದೆಂದು ಸುಳುವು ಕಂಡು ಬರುತ್ತದೆ. ಇನ್ನೊಂದು ಮಹತ್ವದ ವಿಷಯವನ್ನು ಇಲ್ಲಿ ಎತ್ತಿ ಹೇಳಬೇಕೆಂದರೆ ನನಗೆ ತಿಳಿದ ಮಟ್ಟಿಗೆ ಇಲ್ಲಿಯವರೆಗೂ ಜಿ.ವೆಂಕಟಸುಬ್ಬಯ್ಯನವರು ಸರ್ವಜ್ಞನ ಬಗೆಗೆ ಎರಡು ಸಾಲನ್ನ ಸಹ ಲೇಖನ ಬರೆದಿಲ್ಲವೆಂದು ಹೇಳಬಹುದೇನೋ! 6 ವೇಮನ ತಿರುವಳ್ಳುವರೆ ಅವರಂತೆ ಸರ್ವಜ್ಞನೂ ನಮ್ಮ ರಾಷ್ಟ್ರೀಯ ವ್ಯಕ್ತಿಗಳಲ್ಲಿ ಒಬ್ಬ ಆದರೆ ಅವನು ನಾವು ಈಗ ತೋರುತ್ತಿರುವ ಅಪೇಕ್ಷೆಗೆ ಒಳಗಾಗಬೇಕಾಗುತ್ತಿರಲಿಲ್ಲವೆಂದು ಕಾಣಿಸುತ್ತದೆ. ಅವನ ಉತ್ಸವವನ್ನು ರಾಷ್ಟ್ರದಾದ್ಯಂತವಾಗಿ ಆಚರಿಸುತ್ತಿದ್ದರು. ಅವನ ವಚನಗಳನ್ನು ಬೇರೆ ಬೇರೆ ಭಾಷೆಗಳಲ್ಲಿ ಪ್ರಕಟಿಸುತ್ತಿದ್ದರು.. ಅಂಚೆ ಇಲಾಖೆ ವಿಶೇಷ ಅಂಚೇಚೀಟಿಗಳನ್ನು ಪ್ರಕಟಿಸುತ್ತಿತ್ತು. ಮೊದಲಾದ ಹಾ. ಮಾ. ನಾಯಕರ ವಿಚಾರಗಳು ತೂಕಬದ್ಧವಾಗಿವೆ. ಜಿ ವೆಂಕಟಸುಬ್ಬಯ್ಯನವರು ಪ್ರಕ್ಷಿಪ್ತವೆಂದು ಹೇಳಿದ ವಚನಗಳು ಪ್ರಕ್ಷಿಪ್ತವಾಗಿಲ್ಲವೆಂದು ಪ್ರೊ. ಜಿ ಎಂ. ಉಮಾಪತಿಶಾಸ್ತ್ರಿಗಳು ಸಾಧಾರವಾಗಿ ಸಿದ್ಧಮಾಡಿದ್ದನ್ನು ವೆಂಕಟಸುಬ್ಬಯ್ಯನವರು ಈಗಲಾದರೂ ಗಮನಿಸಬೇಕು. "ಕುಂಬಾರ ಮಾಳಿಯಲ್ಲಿ ದ್ವಿಜೋತ್ತಮನೊಬ್ಬನಿಗೆ ಹುಟ್ಟಿದವನು ಸರ್ವಜ್ಞ ಎಂಬ ಕತೆಯಲ್ಲಿ ಈ ದೇಶದ ಪ್ರತಿಭೆಯೆಲ್ಲವಾ ಪ್ರತಿಷ್ಠಿತ ವರ್ಣದ ಬೀಜದ ಬೆಳಸು ಎಂಬ ಪರಂಪರಾಗತವಾದ ಪ್ರತಿಷ್ಠೆಯ ಪ್ರಕ್ಷೇಪ ಇದು ಯಾಕಾಗಿರಬಾರದು ಎಂಬ ಪ್ರಭಲವಾದ ಸಂದೇಹ ನಮಗೆ" ಎಂದಿರುವ ಡಾ. ಜಿ ಎಸ್ ಶಿವರುದ್ರಪ್ಪನವರ ವಿಚಾರಗಳ ಬಗೆಗೆ (ಸರ್ವಜ್ಞ ವಿಶೇಷ ಸಂಚಿಕೆ. ಕರ್ನಾಟಕ ಭಾರತಿ ನಂ. 7 ಸಂಚಿಕೆ : 4 ಅಕತೃತಿಯಾ ಕ. ವಿ. ವಿ. ಪ್ರಕಟಣೆ — 1975) ವೆಂಕಟಸುಬ್ಬಯ್ಯನವರ ಉತ್ತರವೇನು :-

---

# ನೋವು

—ಸುಮನಾ

ಎಲ್ಲರ ಬಾಳಿನಲ್ಲೂ ನೋವು ನಲಿವುಗಳ ದ್ವಂದ್ವದ ಆಟ ನಡೆದೇ ತೀರುತ್ತದೆ.
ಒಮ್ಮೊಮ್ಮೆ ನಲಿವಿನೊಳಗಿನ ನೋವುಬೃಹದಾಕಾರವಾಗಿ ಹಬ್ಬಿ
ಬಾಳನ್ನೇ ಆಹುತಿಗೊಳ್ಳುತ್ತದೆ- ಇದನ್ನು ಪ್ರಸಿದ್ಧ ಮಹಿಳಾ
ಬರಹ ಗಾರರು ಸುಂದರವಾಗಿ ಬರೆದಿದ್ದಾರೆ. —ಸಂ.

ರೇಣು ಒಂದೇ ಸಮನೆ ಬಟ್ಟೆಯನ್ನು ಟಪ್ ಟಪ್ ಎಂದು ಬಡಿಯುತ್ತಿದ್ದಾಳೆ. ಆಕೆಯ ಕೈ ಬಳೆಗಳು ಒಗೆಯುವ ಬಂಡೆಯೊಡನೆ ಸ್ಪರ್ಧಿಸುವಂತೆ ಝಣತ್ಕಾರ ಮಾಡುತ್ತಿವೆ. ಸೂರ್ಯರಾಯ ತನ್ನ ಅಧಿಕಾರ ಚಲಾಯಿಸುತ್ತಿದ್ದಾನೆ. ರೇಣುವಿಗೆ ಮಾತ್ರ ಇದಾವುದರ ಅರಿವೇ ಇಲ್ಲ. ಆಕೆ ತನ್ನ ಗಂಧರ್ವ ಲೋಕದೊಡೆಯ ರಾಜುವಿನೊಡನೆ ಸುಖಿಸುತ್ತಿದ್ದಾಳೆ.

ರಾಜುವಿನೊಡನೆ ಕಳೆದ ಸುಖದ ದಿನಗಳು ಆಕೆಯ ಅಂತರಾಳದ ಕಂಗಳ ಮುಂದೆ ತೆರೆ–ತೆರೆಯಾಗಿ ಗೋಚರವಾಗುತ್ತಿದೆ. ಅಕ್ಕನ ಊರಿನಿಂದ ಹಿಂದಿರುಗಿ ಬಂದ ಕೆಲವೇ ದಿನಗಳಲ್ಲಿ, ಅಮ್ಮ ಊರಿಗೆ ಹೋಗಿದ್ದಾಗ ಮಧ್ಯಾಹ್ನದ ಬಿಸಿಲನ್ನು ಲೆಕ್ಕಿಸದೆ ರಾಜುವಿನೊಡನೆ ಮನೆಯ ಹಿತ್ತಲ ಮರದ ಹಿಂದೆ ಕದ್ದು ಮಾತಾಡಿದ್ದು "ನೀನು ರೇಣುವೇ ಎಂದು ಸಂಶಯವಾಗುತ್ತಿದೆ" ನನಗೆ ಒಂದು ವರ್ಷದಲ್ಲಿ ಎಷ್ಟೊಂದು ಬದಲಾಯಿಸಿದ್ದೀ ? ಲಂಗದ ಹುಡುಗಿಯಾಗಿದ್ದಾಗ ನನ್ನ ಅಂಗಡಿ ಮುಂದೆ ಬಂದು ಆ ಬಟ್ಟೆ ಚೆನ್ನಾಗಿಲ್ಲ ಇದು ಚೆನ್ನಾಗಿದೆ ಹಾಗೆ ಹೀಗೆ ಎಂದು ಹರಟೆ ಹೊಡೆಯುತ್ತಿದ್ದವಳು, ಈ ದಿನ ಸೀರೆ ಹುಡುಗಿಯಾಗಿಬಿಟ್ಟದ್ದೀ ? ಜೊತೆಗೆ ಜಂಬ ಬೇರೆ ಬಂದಿದೆ. ಎನ್ನಲು ತಕ್ಷಣ ಆತ ಕಿವಿ ಹಿಂಡಿ ಹೂಂ ನಿನ್ಗೆ ತಾನೆ ಜಂಭ ? ಅಬ್ಬಾ ! ನೀನೇಕೆ ನನ್ನನ್ನು ಆ ರೀತಿ ನೋಡ್ತಿ ? ಎಂದಾಗ ರಾಜು " ಪಾಪ ದೃಷ್ಟಿತಾಗುತ್ತೇನೋ ? ಎಂದು ಕಿವಿಹಿಂಡಿದ್ದು, ಹೌದು ಎಂದು ಬಿಡಿಸಿಕೊಂಡು, ಅಬ್ಬಾ ! ಅಪ್ಪ ಬಂದು ಬಿಟ್ಟರೆ ಕಷ್ಟ ನಾಳೆ ಮಾತಾಡೋಣ ಎಂದು ಹೇಳಿ ಮನೆಯೊಳಗೆ ನುಸುಳಿ ಬಾಗಿಲು ಭದ್ರಪಡಿಸಿಕೊಂಡಿದ್ದೆ.

ಅಂದು ಎಣ್ಣೆ ಸ್ನಾನ ಮಾಡಿದ್ದುದರಿಂದ ಬಿಸಿಲಿನಲ್ಲಿ ಕೂದಲು ಒಣಗಿಸಿಕೊಳ್ಳೋಣ ಎಂದು ಹಿತ್ತಲಿನಲ್ಲಿ ನಿಂತಿದ್ದಾಗ ರಾಜು ಮರದ ಹಿಂದೆ ಕದ್ದು ನಿಂತಿದ್ದು ರೇಣು... ರೇಣು ಎಂದು ಮೆಲ್ಲನೆ ಕರೆದಾಗ ನಾನು ಎಲ್ಲಿ ಅಮ್ಮ ನೋಡಿ ಬಿಟ್ಟಾಳೋ ಎಂಬ ಭಯದಿಂದ ಮೆಲ್ಲನೆ ಹೋಗಿ ರಾಜುವಿನೊಡನೆ ಮಾತಾಡುತ್ತಿದ್ದೆ. ರಾಜು ನನ್ನ ನೀಳ ಕೇಶರಾಶಿಯೊಡನೆ ಆಟವಾಡುತ್ತಾ ಇದ್ದ. ನಾನು ಆತನ ಕಿವಿ ಹಿಂಡಿ " ಬಿಡು ನನ್ನ ಕೂದಲು ನೊಯುತ್ತದೆ ಎಂದಾಗ ನನ್ನನ್ನು ಬರಸೆಳೆದುಕೊಂಡದ್ದು..

ಹೂಂ. ರಾಜು ಸಿನಿಮಾ ನೋಡಿ ಬಂದ ದಿನವೆಲ್ಲ ಕಥೆ ಹೇಳು ಎಂದು ಪೀಡಿಸುತ್ತಿದ್ದೆ. ಒಮ್ಮೊಮ್ಮೆ ಕಥೆ ಪೂರ್ತಿ ಹೇಳುವವರೆಗೆ ಅಂಗಡಿ ಬಾಗಿಲು ತೆಗೆಯೋದಕ್ಕೂ ಬಿಡುತ್ತಿರಲಿಲ್ಲ. ಆಗ ರಾಜು ಏಳುತ್ತಿದ್ದ ಮಾತುಗಳು ಹೂಂ. ನನ್ನನ್ನು ಬುಟ್ಟಿಗೆ ಹಾಕ್ಕೋಬೇಕು ಅಂತ ಮಾಡಿದ್ದೀಯಾ ? ಎನ್ನಲು ನಾನು ತಕ್ಷಣ ನೀನೇನು ಮಹಾ ನನ್ನನ್ನು ಬುಟ್ಟಿಗೆ ಹಾಕೊಂಡಿಲ್ವಾ ಎಂದು ಹೇಳಿ ಮನೆಗೆ ಹೋಗಿ ಏನೂ ತಿಳಿಯದವಳ ರೀತಿ ಅಮ್ಮನ ಮುಂದೆ ಇರುತ್ತಿದ್ದುದು.

ಅಂದು ಮಧ್ಯಾಹ್ನ ಹನ್ನೆರಡು ಗಂಟೆಯೇನೋ. ಅಮ್ಮ ಚೆನ್ನಾಗಿ ಗೊರಕೆ ಹೊಡೆಯುತ್ತಿದುದನ್ನು ಕೇಳಿಸಿಕೊಂಡು ಹಿತ್ತಲ ಮರದ ಹತ್ತಿರ ಹೋದೆ, ಅಲ್ಲಿ ರಾಜುವಿನ ಸುಳಿವಿರಲಿಲ್ಲ ಮೆಲ್ಲನೆ ಬೇಲಿ ದಾಟಿ ರಾಜುವಿನ ಮನೆ ಪ್ರವೇಶಿಸಿದೆ. ದೇವರ ದಯದಿಂದ ರಾಜುವಿನ ಅಪ್ಪ ಮನೆಯಲ್ಲಿರಲಿಲ್ಲ. ಅಮ್ಮ ಎಂದೋ ಸ್ವರ್ಗ ಸೇರಿಬಿಟ್ಟಿದ್ದಳು. ಸರಿ ಧೈರ್ಯದಿಂದ ಒಳ ನುಗ್ಗಿದೆ. ನಾನು ಕಂಡ ದೃಶ್ಯ ಸದಾ ನಗು ಮುಖದಿಂದ ಇರುತ್ತಿದ್ದ



ರಾಜು ಅಂದು ಮುಖ ಸಪ್ಪಗೆ ಮಾಡಿಕೊಂಡು ಕುಳಿತಿದ್ದರು. ನಾನು ಹಿಂದಿನಿಂದ ಹೋಗಿ ಕಣ್ಣು ಮುಚ್ಚಿದಾಗ "ರೇಣು ಬಿಡು" ಎಂದು ನನ್ನ ಕೈ ಬಿಡಿಸಿ ಇಲ್ಲಿಗೇಕೆ ಬಂದೆ ? ಎನ್ನಲು ನನಗೆ ಕೋಪಾ ಬಂದು ಮನೆಯಕಡೆ ತಿರುಗುತ್ತಿರಲು ರಾಜು ಬಿಡದೆ ಬಾಗಿಲವರೆಗೆ ಬಂದು ಪುನಃ ನನ್ನನ್ನು ಒಳಗೆ ಕರೆದೊಯ್ದು, ರೇಣು, ನಿನ್ನ ಕೈ ಹಿಡಿಯ ಬೇಕಾದರೆ ಎಷ್ಟು ಗಂಡಾಂತರಗಳನ್ನು ಎದುರಿಸಬೇಕು. ಗೊತ್ತಾ? ಎಂದಾಗ ಅದೇನು ಮಹಾ ಅಂತಹುದು ಎನ್ನಲು ರಾಜು ತಿಳಿಸಿದ ವಿಷಯ ಆತನ ತಂದೆಗೂ ನನ್ನ ತಂದೆಗೂ ಯಾವುದೋ ವಿಷಯಕ್ಕೆ ವಿರಸವಾಗಿ ಬೇರೆ ಬೇರೆ ಪಾರ್ಟಿಯಾದುದು, ಅವರ ದ್ವೇಷದ ಬೆಂಕಿಯೊಳಗೆ ಸಿಕ್ಕಿಕೊಂಡಿರುವ ನಮ್ಮ ಗತಿ ? ನಮ್ಮ ಮದುವೆ ನಡೆಯುವ ಬರವಸೆಯೇ ಇಲ್ಲವಾಯ್ತು ನಮಗೆ, ದುಃಖದಿಂದ ಮನೆಗೆ ಇಂತಿರುಗಿದ್ದೆ.

ನನ್ನ—ರಾಜುವಿನ ಮದುವೆ ಯಾವಾಗಲೂ ನನ್ನ ಮನಸ್ಸಿನಲ್ಲಿ ಕೊರೆಯುತ್ತಲೇ ಇತ್ತು. ಸರಿ ಒಂದು ತಿಂಗಳವರೆಗೆ ಖಾಯಿಲೆ ಮಲಗಿ ಕೃಶವಾದೆ. ಸ್ವಲ್ಪ ಚೇತರಿಸಿಕೊಂಡ ಮೇಲೆ ರಾಜುವನ್ನು ನೋಡಲು ಕದ್ದು ಹೋದಾಗ ರಾಜು ನನ್ನ ಕೈ ಹಿಡಿದುಕೊಂಡು ನನಗೆ ಧೈರ್ಯ ತುಂಬಿ ಏನು ಕಷ್ಟಬಂದರೂ ನಿನ್ನ ಕೈ ಹಿಡಿಯುವೆ. ನಿನಗಾಗಿ ನನ್ನ ಪ್ರಾಣವನ್ನೇ ಕೊಡುವೆ ಎಂದಾಗ ಆತನ ಎದೆಯಾಸರೆಯಲ್ಲಿ ಮಲಗಿ ಸುಖಿಸಿದುದು. ಅಂದು ಹಬ್ಬದ ಹೋಳಿಗಯನ್ನು ಕದ್ದು ತೆಗೆದುಕೊಂಡು ಹೋಗಿ ರಾಜುವಿಗೆ ಕೊಟ್ಟಾಗ ರಾಜು ನನ್ನನ್ನೇ ನೋಡುತ್ತಾ ಹೋಳಿಗೆಗಿಂತ ನೀನೇ ಸಾಕು ಎಂದದ್ದು. ಹಬ್ಬದ ಸೀರೆಯಲ್ಲಿ ತಾನೆಷ್ಟು ಸುಂದರವಾಗಿ ಕಾಣುವೆನೆಂಬುದಕ್ಕೆ ಅದೇನೋ ಹೇಳಿದ್ದನಲ್ಲಾ ಹೂಂ ಏನು "ಸ್ತ್ರೀ ರೂಪವೇ ರೂಪಂ, ಶೃಂಗಾರವೇ ರಸಂ" ಅಂತ ಎಂದಿದ್ದನ್ನು ನೆನೆದು ಮುಗುಳು ನಗುತ್ತಿರಲು....

ತಲೆಯ ಜುಟ್ಟನ್ನು ಭದ್ರವಾಗಿ ಹಿಡಿದೆಳೆದಾಗಲೇ ಕನಸಿನ ಲೋಕದಿಂದ ಎಚ್ಚೆತ್ತ ರೇಣು ತಾಯಿಯ ಕೈ ತನ್ನ ಜುಟ್ಟು ಹಿಡಿದಿರುವುದನ್ನು ನೋಡಿ ಮುಖ ಸಪ್ಪಗೆ ಮಾಡಿಕೊಳ್ಳಲು ತಾಯಿ........ಒಂದೇ ಸಮನೆ ನೋಡ್ತಾ ಇದ್ದೇನೆ, ಒಂದೇ ಬಟ್ಟೇನಾ ಅಷ್ಟು ಹೊತ್ತಿನಿಂದ ' ಟಪ್ ಟಪ್ ' ಎಂದು ಬಡೀತಾ ಇದೀಯಲ್ಲ ಮೈ ಮೇಲೆ ಜ್ಞಾನ ಇದೆಯೋ ಇಲ್ವೋ ಎಂದು ಮೂತಿಗೆ ತಿವಿದು, ಒಬ್ಬಳೇ ಮಗಳು ಎಂದುಕೊಂಡು ಅಂಗೈಯೊಳಗೆ ಮುಚ್ಚಿ ಸಾಕಿದ್ದಕ್ಕೆ ನೀನು ಮಾಡಿದ ಪ್ರತ್ಯುಪಕಾರವೇ ? ಇದು. ಮನೆತನಕ್ಕೆ ಮಸಿ ಬಳಿದೆಯಲ್ಲೇ ? ಯಾವ ಕುಲದಲ್ಲಿ ಜನಿಸಬೇಕಿತ್ತೋ ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿಬಿಟ್ಟೆ. ಪಾಪಿ, ಊರಿನಲ್ಲಿದ್ದುಕೊಂಡು ಬಾಳಲು ಬಿಡದೆ ಈ ಪಾಳು ಮಠದಲ್ಲಿ ವಾಸಿಸುವಂತೆ ಮಾಡಿದೆಯಲ್ಲಾ ಪಾಪಿ, ಚಂಡಾಲಿ ಎಂದು ತಲೆ ತಲೆಗೆ ಬಡಿದಾಗ ನೋವು ತಾಳಲಾರದೆ ' ಅಮ್ಮಾ ' ಎಂದು ಚೀರಲು. ಪಾಪಿ ಇನ್ನೊಂದ್ಸಾರಿ 'ಅಮ್ಮಾ ' ಎನ್ನು ನಿನ್ನ ನಾಲಿಗೆ ಸೀಳಿ ಬಿಡುವೆ ಎಂದು ಮತ್ತೆ ಗುದ್ದಿ ಒಳಗೆ ಹೋದರು.

ಬಿಕ್ಕಿ, ಬಿಕ್ಕಿ ಅಳಲಾರಂಭಿಸಿದಳು. ರೇಣು ಕರುಳು ಕಿತ್ತು ಬರುವಂತೆ ಅತ್ತರೂ ಆಕೆಗೆ ಯಾರೂ ಸಮಾಧಾನದ ಮಾತಾಡುವವರಿಲ್ಲ. ನಾನು ಮಾಡಿದ ತಪ್ಪು ಈ ರೀತಿ ಅಂತ್ಯವಾಗುವುದು, ಎಂದುಕೊಂಡಿರಲಿಲ್ಲ. ದೇವರೇ ನಾನ. ನನ್ನ ಬಾಳನ್ನೇಕೆ ಹೀಗೆ ಮಾಡಿದೆ, ನಿನ್ನ ಕ್ರೂರ ದೃಷ್ಟಿ ನನ್ನ ಮೇಲೆ ಬಿತ್ತೆ ? ಹುಟ್ಟಿದಂದಿನಿಂದಲೂ ರಾಜು–ರೇಣು ಗಂಡ–ಹೆಂಡತಿ ಎಂದು ರೇಗಿಸುತ್ತಿದ್ದ ಹಳ್ಳಿ ಜನರೆಲ್ಲಾ ಈ ದಿನ ನಮ್ಮಿಬ್ಬರನ್ನೂ ಹೀನ ದೃಷ್ಟಿಯಲ್ಲಿ ಕಾಣುವರಲ್ಲಾ.... ಹೌದು ನಿಜ ನಾನು ಅಂದು ರಾಜುವಿನ ಮನಸ್ಸನ್ನು ನೋಯಿಸಲಾರದೆ ಆತನಿಗೆ ನನ್ನನ್ನು ಸಮರ್ಪಿಸಿಕೊಂಡೆ. ಯಾವ ಹದ್ದಿನ ಕಣ್ಣು ನಮ್ಮ ಮೇಲೆ ಬಿತ್ತೋ ಏನೋ ಅಂದು ನಾವಿಬ್ಬರೂ ಮಾತನಾಡುತ್ತಿರುವಾಗ ಅಪ್ಪ ಮರದ ಹಿಂದೆ ಬಂದು ನನ್ನ ಜುಟ್ಟಿಗೆ ಕೈ ಹಾಕಿ ಎಳೆದುಕೊಂಡು ಬಂದು ಕೋಣೆಯಲ್ಲಿ ಕೂಡಿ ಹಾಕಿ, ಉಪವಾಸವಿರಿಸಿ, ಮೈ ಪುಡಿಯಾಗುವಂತೆ ಒಡೆದು ಬಡಿದು ಸಾಯಿಸಲು ಪ್ರಯತ್ನಿಸಿ, ಕೊನೆಗೆ ಎದುರಿ ಅರೆಹೊಟ್ಟೆ ಕೊಟ್ಟು ಕತ್ತೆಯಂತೆ ದುಡಿಸಿಕೊಳ್ಳುತಿದ್ದಾರೆ. ಯಾರೊಬ್ಬರೂ ನನ್ನೊಡನೆ ಮಾತನಾಡುವುದಿಲ್ಲ. ಮೂಕ ಪ್ರಾಣಿಯಂತೆ ಜೀವಿಸುತ್ತಿದ್ದೇನೆ. ರಾಜುವಿನೊಡನೆ ನನ್ನ ಮದುವೆ ಮಾಡಬಹುದಾಗಿತ್ತು. ಅಪ್ಪ, ತನ್ನ ದ್ವೇಷ ಮರೆತು. ಪಾರ್ಟಿಯೇ ಮುಖ್ಯ ಈ ಹಳ್ಳಿಗೆ, ಅಯ್ಯೊ ರಾಜುವಿನ ಬಾಳಗೆಳತಿಯಾಗಿ ಆತನ ಪ್ರೇಮದ ಆಸರೆಯಲ್ಲಿ ಬಾಳನ್ನು ಬೆಳ

(13ನೇ ಪುಟ ನೋಡಿ)

# ಭಾವ - ಗಂಗಾ

**—ಜಯಸಿಂಹ**

ಅಂತರ್‌ಮುಖಿಯಾದಾಗ ತಮ್ಮ ಮನದಲ್ಲಿ ಮೂಡಿ ಬಂದ ಭಾವ-ಗಂಗೆಯನ್ನು ಓದುಗರ ಭೂಮಿಕೆಯಲ್ಲಿ ಮಾನ್ಯ ಲೇಖಕರು ಹರಿಯಬಿಟ್ಟಿದ್ದಾರೆ. —ಸಂ.

## ೧ ಜೀವನವೆಂದರೇನು ?

ಹೌದು, ಜೀವನವೆಂದರೇನು ? ಪ್ರತಿಯೊಬ್ಬನೂ ತನ್ನನ್ನು ತಾನು ಪ್ರಶ್ನಿಸಿಕೊಳ್ಳಬೇಕಾದ ಪ್ರಶ್ನೆ ಇದು. ಮಾನವ ತಾನು ಇರುವ ಅಲ್ಪ ಅವಧಿಯಲ್ಲಿ ಏನೇನನ್ನು ಬಯಸುತ್ತಾನೆ. ಏನೆಲ್ಲಕೆಲ್ಲಾ ಪ್ರಯತ್ನಪಡುತ್ತಾನೆ. ನಾನು, ನನ್ನಿಂದ, ನನ್ನದು, ನನಗಾಗಿ –ಇದೇ ಅವನ ನಿತ್ಯ ಜಪವಾಗಿಬಿಟ್ಟಿದೆ. ಸರ್ವಸ್ವವನ್ನೂ ತನ್ನದೇ ಆದ ವೃತ್ತದೊಳಗಿಂದ ನೋಡುತ್ತಾನೆ ದೂರದ ಬೆಟ್ಟ ಸಣ್ಣಗಿದೆ ಎನ್ನುತ್ತಾನೆ. ಇರುವ ಕೆಲವೇ ನಿಮಿಷಗಳಲ್ಲಿ ಜಗತ್ತೇ ತನ್ನದೆನ್ನುತ್ತಾನೆ. ಸ್ವಾತಂತ್ರ್ಯವೆಂದು ಕೂಗಾಡುತ್ತಾ ತನಗೇ ಗೊತ್ತಿಲ್ಲದ ಹಾಗೆ ಬಂಧನದೊಳಗೆ ಬೀಳುತ್ತಾನೆ. ಇಂದೊ, ನಾಳೆಯೊ ತಾನು ಹೋಗುವವ ಎನ್ನುವುದನ್ನು ಸಂಪೂರ್ಣ ಮರೆಯುತ್ತಾನೆ. ತಾನು ಎಂದೆಂದೂ ಇರುವನಂತೆ ನಾನೇ ತಾನಾಗುತ್ತಾನೆ. ಬೇರೆ ಜನರು ತನ್ನಂತೆ ಆಸೆ ಪಡುತ್ತಾರೆ, ತನಗಿರುವಂತೆ ಅವರಿಗೂ ತರಾವರಿ ಬಯಕೆಗಳಿರುತ್ತದೆ ಎಂಬುದನ್ನು ಸಂಪೂರ್ಣ ಮರೆಯುತ್ತಾನೆ. ಇದು ಸಾಮಾನ್ಯವಾಗಿ, ಸಾಮಾನ್ಯ ಜನರಲ್ಲಿ ಕಂಡು ಬರುವ ಜೀವನದ ಹೊರರೂಪ.

ಆದರೆ ನಿಜವಾಗಿಯೂ ಜೀವನವೆಂದರೆ ಯಾವುದು ? ಯಾವುದು ಸರಿಯಾದ, ಸಾರ್ಥಕವಾದ ಜೀವನ? ದೊಡ್ಡವರ ದೃಷ್ಟಿಯಲ್ಲಿ ಪರೋಪಕಾರವೇ ಜೀವನ ಪರಪೀಡನೆಯೇ ಮರಣ.

ತಾನು ತನಗಲ್ಲ; ತಾನು ಮತ್ತೊಬ್ಬರಿಗಾಗಿ, ತನ್ನ ಜೀವ ಜನರಿಗಾಗಿ, ತಾನು ಗಳಿಸಿರುವ ಸಂಪತ್ತು, ಸ್ವತ್ತು, ಸತ್ವ ತನಗೊಬ್ಬನಿಗಾಗಿಯೇ ಅಲ್ಲ ಸಕಲ ಜನರ ಹಿತಕ್ಕಾಗಿ, ಸಮಾಜಕ್ಕಾಗಿ, ದೇಶಕ್ಕಾಗಿ, ಇಡೀ ವಿಶ್ವಕ್ಕಾಗಿ.

ಪರರು ದುಃಖಪಟ್ಟಾಗ ತನ್ನ ಕಣ್ಣೀರು ಉದುರುತ್ತದೆ. ಪರರು ಸಂತೋಷ ಪಟ್ಟಾಗ ತನ್ನ ಮುಖ ಅರಳುತ್ತದೆ. ಪರರ ಉತ್ಸಾಹಕ್ಕೆ ತನ್ನ ಹೃದಯ ಉಲ್ಲಸಿತವಾಗುತ್ತದೆ.

ಪರರ ಕಿರುನಗೆಗಾಗಿ ತಾನು ಕಿರುನಾಗರದ ಬಾಯಲ್ಲಾದರೂ ಕೈಯಿಟ್ಟೇನು; ಹುಟ್ಟಿದ ಸಮಾಜಕ್ಕಾಗಿ, ಪೋಷಿಸಿದ ದೇಶಕ್ಕಾಗಿ ತನ್ನನ್ನು ತಾನು ಸಮರ್ಥಿಸಿಕೊಂಡೇನು ಎಂದು ಸಮಾಜಕ್ಕಾಗಿ, ದೇಶಕ್ಕಾಗಿ "ದೇಹಾರ್ಪಣ, ಹೃದಯಾರ್ಪಣ, ಭಾವಾರ್ಪಣ, ಆತ್ಮಾರ್ಪಣ" ಎಂದು ಹಾಡುತ್ತಾ ಮಾನವತೆಯ ಅಡಿಗಲ್ಲ ಮೇಲೆ ನಿಂತ; ಶಾಂತ; ಧೀಮಂತ; ಸಂತನ ಜೀವನವೇ ದೊಡ್ಡವರ ದೃಷ್ಟಿಯಲ್ಲಿ ನಿಜವಾದ ಜೀವನ, ಸಾರ್ಥಕವಾದ ಜೀವನ; ಪರಿಪೂರ್ಣಜೀವನ.

## ೨. ಮಾತು :

ಮಾತಿನಲ್ಲಿ ಸಕಲವೂ ಅಡಗಿದೆ. ಮಾತಿನಿಂದ ಗೆಲ್ಲಬಹುದು. ಅಥವಾ ಸೋಲಬಹುದು. ಮಾತು ಬಲ್ಲವನಿಗೆ ಜಗಳವಿಲ್ಲ. ಸವಿ, ಸಿಹಿಯಾದ ಮಾತು ಮಾಡದಿರುವುದಾದರೂ ಏನು ? ಅರ್ಥಗರ್ಭಿತವಾದ ಸಮಯೋಚಿತ ಮಾತುಗಳು ಹೃದಯವನ್ನು ಮುಟ್ಟಬಲ್ಲದು. ತಪ್ಪು ಗ್ರಹಿಕೆ, ಜಗಳ, ಮನಸ್ತಾಪಗಳನ್ನು ಮೆಟ್ಟಬಲ್ಲುದು.

ಮಾತು ಬೇಕು ಆದರೆ ಅದರಲ್ಲಿ ಒಂದು ಮಿತಿಯೂ ಬೇಕು. ಬಹಳವಾದ ಮಾತು ಹರಟೆಯೆಸಿ



ಕೊಳ್ಳುತ್ತದೆ. ಮಾತಿಲ್ಲದೇ ಮೌನ ಸುಂದರನಾದರೆ ಅವನು ಸಮಾಜದಿಂದ ದೂರ ಉಳಿಯುತ್ತಾನೆ. ಸಮಾಜದಲ್ಲಿ ಸಮವಾಗಿ, ಸವಿಯಾಗಿ ಬೆರೆಯಬೇಕಾದರೆ ಮಿತವಾದ, ಹಿತವಾದ ಮಾತು ಅವಶ್ಯಕ.

ಮಾತು ಸರಳವಾಗಿರಬೇಕು; ಶೈಲಿ ಗಂಭೀರವಾಗಿರಬೇಕು; ಮನಸೆಳೆಯುವಂತಿರಬೇಕು, ತಂಪು ಕೊಡುವಂತಿರಬೇಕು. ಕ್ಲಿಷ್ಟ ಪದಗಳನ್ನು ಬಳಸುವುದನ್ನು ಆದಷ್ಟು ಕಮ್ಮಿ ಮಾಡಬೇಕು. ಮಾತು ಮತ್ತೊಬ್ಬರ ಮನಸ್ಸನ್ನು ಪ್ರಸನ್ನೀಕರಿಸಬೇಕೇ ವಿನಹ ಬೇಸರ ಉಂಟುಮಾಡಬಾರದು.

ಮಾತು ಬರುವುದರಿಂದ ಮನುಷ್ಯನೆಂದು ಹೆಸರು ಪಡೆಯುತ್ತಾನೆ. ಆದರೆ ಮಾತನ್ನಾಡುವುದೇ ಮನುಷ್ಯನ ಮುಖ್ಯ ಕೆಲಸವಲ್ಲ. ಮಾತಿನಲ್ಲಿ ಮರ್ಮವಿರಬೇಕು; ತಿಳಿಯಿರಬೇಕು; ತಿಳುವಿರಬೇಕು; ತಿರುಳಿರಬೇಕು. ಮಾತಿನಲ್ಲಿ ತೂಕವಿರಬೇಕು. ಹಗುರವಾದ ಜೊಳ್ಳು ಮಾತನಾಡುವುದಕ್ಕಿಂತ ಸುಮ್ಮನಿರುವುದು ಮೇಲು. "ಮಾತು ಮನೆಗೆಡಿಸಿತು" ಎನ್ನುವುದೇ, ಮಾತನಾಡುವುದೇ ಮನುಷ್ಯನ ಮುಖ್ಯ ಕೆಲಸವೆನ್ನುವವರ ದಾರಿ ದೀಪ; ತಿಳಿಸಿ ಹೇಳುವ ತಿಳಿಗನ್ನಡಿ.

ಆಡಬೇಕಾದ ಮಾತುಗಳನ್ನು ಆಡುವುದಕ್ಕೆ ಮೊದಲು ಅವುಗಳನ್ನೆಲ್ಲಾ ಹೃದಯದಲ್ಲಿ ಸುರಿದು, ಕದಡಿ, ಜಾಲಾಡಿ, ಹಿಂಡಿದ ಮೇಲೆ ಹೊರಬಿಡುವುದು ಸೂಕ್ತ. ಆಗ ಆ ಮಾತಿಗೊಂದು ಬೆಲೆ; ನೆಲೆ; ನೆಲೆ.

—

(11ನೇ ಪುಟದಿಂದ)

ಗಿಸಬಹುದಿತ್ತು ಹೂಂ ಅದು ನನ್ನ ಪಾಲಿಗೆ ಕನಸಾಯಿತು.

ಉಂ. ಅಂದು ರಾಗಿ ಮಾಡುತ್ತಿದ್ದ ಕೆಂಪಿ ನನ್ನ ಮುಖ ನೋಡಿ ಕನಿಕರದಿಂದ ರೇಣವ್ವ ಏಕೆ ಹೀಗಾಗಿಬಿಟ್ಟೆ ತಾಯಿ. ನಿನ್ನಪ್ಪ, ಅವ್ವಂದು ಕಠಿಣ ಹೃದಯ ತಾಯಿ ನನ್ಗ ಗೊತ್ತಿಲ್ವೆ. ಉಂ. ದಿನಾ ನೀನು ಕದ್ದು ಕೊಟ್ಟ ಹಿಟ್ಟು ತಿಂದು ಬೆಳೆಯುತ್ತಿರುವ ನನ್ಗೆ, ನಿನ್ಗ ಸಹಾಯ ಮಾಡಲಿಕ್ಕಾಗ್ಲಿಲ್ವಲ್ಲ ಅಂತ ಅನ್ನಿಸುತ್ತೆ, ಏನ್ಮಾಡೋದು ತಾಯಿ. ಮೊನ್ನೆ ನಾನೇ ರಾಜಪ್ಪನ ನೋಡ್ದೆ ತಾಯಿ ಎನ್ನಲು, ನಾನು ಆಕೆಯ ಮುಖವನ್ನು ಆಸೆ ತುಂಬಿದ ಕಂಗಳಿಂದ ನೋಡಲು, ನಾನು ಆಕೆ ಹೇಳಿದ ಮಾತುಗಳು ರಾಜು ಕುಂಟ-ಕುರುಡ ಕೈ ಯಿಲ್ಲದವ ತಂದೆಕಡೆಯ ಪಾರ್ಟಿಯುಲ್ಲ ಸೇರಿ ರಜುವಿನ ಕಣ್ಣು ಕಿತ್ತು ಒಂದು ಕಾಲನ್ನು ಕತ್ತರಿಸಿ ಹಾಕಿ ಸಾಯಿಸಲು ಪ್ರಯತ್ನಿಸುತ್ತಿದ್ದಾಗ ಪೋಲಿಸ್‌ರವರ ಆಗಮನದಿಂದ ರಾಜು ಉಳಿದುಕೊಂಡಿದ್ದು, ತನ್ನ ನೋವಿನಲ್ಲೂ ರೇಣುವನ್ನು ನೋಯಿಸಬೇಡಿ, ಎಷ್ಟೇ ಕೋಪವಿದ್ದರೂ ನನ್ನ ಮೇಲೆ ತೀರಿಸಿಕೊಳ್ಳಿ ಎಂದದ್ದು.... ಅಯ್ಯೋ ದೇವರೇ ನನ್ಗೆ ಸಾವನ್ನೇಕಪ್ಪ ಕೊಡಲಿಲ್ಲ ಎಂದು ಬಿಕ್ಕುತ್ತಿರಲು....

ಸೌದೆ ಸೀಳಿನಿಂದ ದಬದಬನೆ ಮತ್ತೆ ಹೊಡೆತ ಬೀಳಲಾರಂಬಿಸಿದಾಗ ರೇಣು ವಾಸ್ತವ ಪ್ರಪಂಚಕ್ಕೆ ಬಂದು ಮೂಕಳಂತೆ ನಿಂತು ತಾಯಿಯೆಡೆಗೆ ದೈನ್ಯದೃಷ್ಟಿ ಹರಿಸಲು ತಾಯಿ ಬಟ್ಟೆ ಜಾಲಾಡಿಸುತ್ತಿದ್ದ ಕೈ ಕಿತ್ತು ನಿನ್ನ ಜನ್ಮ ಜಾಲಾಡಿಸಿದರೂ ನಿನ್ಗೆ ಬುದ್ಧಿ ಬರಲ್ಲಾ ನಡಿ ಒಳಗೆ ಎನ್ನಲು ಭಾರವಾದ ಹೆಜ್ಜೆ ಕಿತ್ತು ಮನೆಯೊಳಗೆ ಪ್ರವೇಶಿಸುತ್ತಿರಲು ಕಣ್ಣು ಕತ್ತಲಿಟ್ಟು ತಲೆ ಸುತ್ತಿ ಕೆಳಗೆ ಬಿದ್ದೆ. ತಾಯಿ ಎಲ್ಲಿ ನೋಡುವಳೋ ಎಂದು ಸಾವರಿಸಿಕೊಂಡು ಎದ್ದು ಮುಸರೆ ತೊಳೆಯಲು ಕುಳಿತೆ. ಹೂ. ರಾಜು ನನ್ನನ್ನು ಪ್ರೀತಿಸಿದುದಕ್ಕೆ ದೊರೆತ ಪ್ರತಿಫಲ... ನಾವಿಬ್ಬರೂ ನಲಿದಾಡಿದುದಕ್ಕೆ ದೇವರು ಕೊಟ್ಟ ಶಿಕ್ಷೆ ನೋವು.... ಸಾಯುವವರೆಗೂ ಕೊನೆಯಾಗದ ನೋವು ನನ್ನ ಬಾಳಿನಲ್ಲಿ ನಡೆದುದು ನೋವುನಲಿವಿನ ಆಟ. ನಲುವಿನೆಳಗಿನ ನೋವು ಬೃಹದಾಕಾರವಾಗಿ ಹಬ್ಬಿ ಸಂಪೂರ್ಣವಾಗಿ ನನ್ನನ್ನು ಆಹುತಿ ಮಾಡಿಕೊಂಡಿತಲ್ಲಾ ಎಂದು ಅಸಮಾಧಾನದ ನಿಟ್ಟುಸಿರು ಬಿಟ್ಟೆ. ನನ್ನ ಜೀವನದಲ್ಲಿ ನಲಿವು ಮೊದಲಾಗಿ ನೋವು ಕೊನೆಯಾಯಿತು. ಹೂಂ. ಇರುವಷ್ಟು ದಿನಗಳನ್ನಾದರೂ ಹೇಗೆ ಕಳೆಯಲಿ ? ಕಳಂಕದ ಮುಖ ಹೊತ್ತು ಸಮಾಜದಲ್ಲಿ ಹೆಣ್ಣಾಗಿ ಬಾಳಲಿ ?

—

ಸಂಗಸಹಿತ ಬಸವ ಲೇಸು,
ಬಸವ ಸಹಿತ ಸಂಗಲೇಸು.

—ಚೆನ್ನಬಸವಣ್ಣ

# ಜ॥ ಕೆ. ಎಸ್. ತಿಮ್ಮಯ್ಯ

—ದಯಾನಂದ ತೊರ್ಕೆ

ಕರ್ನಾಟಕದ ಅನೇಕ ಕಲಾವಿದರು, ಸಾಹಿತಿಗಳು, ದೇಶಭಕ್ತರು ಜಾಗತಿಕ ಪ್ರಸಿದ್ಧಿ ಪಡೆದಂತೆ ಜ॥ಕೆ.ಎಸ್.ತಿಮ್ಮಯ್ಯನವರು ಅತ್ಯುತ್ತಮ ಸೈನಿಕನೆಂದು ಜಗತ್ತಿಗೆಲ್ಲ ಪ್ರಸಿದ್ಧರಾದವರು. ಅಜಾನುಬಾಹು ಶರೀರದ ಜ॥ತಿಮ್ಮಯ್ಯ ಬೇಟೆಯಾಡುವುದರಲ್ಲೂ ಪ್ರಸಿದ್ಧಿ ಪಡೆದಿದ್ದರು. ಕೊಡಗಿನ ಈ ಕನ್ನಡ ಯೋಧ ರಾಷ್ಟ್ರಕ್ಕೆ, ಜಗತ್ತಿಗೆ ಸಲ್ಲಿಸಿದ ಸೇವೆ ಅಮೋಘವಾದುದು. ಅವರನ್ನು ಓದುಗರಿಗೆ ಪರಿಚಯಮಾಡಿಕೊಡಲಾಗಿದೆ.

ತಿಮ್ಮಯ್ಯನವರ ತುರಿದೆಂದರಾ ಗೋತ್ರದ ಮನೆತನ ಸುಸಂಸ್ಕೃತವಾದುದು. ಹೀಗಾಗಿ ಇವರಿಗೆ ಹುಟ್ಟಿನಿಂದಲೇ ಒಳ್ಳೇ ಸಂಸ್ಕಾರ ಲಭಿಸಿತು. ಇವರಿಗೆ ೯ ವರ್ಷ ವಯಸ್ಸಾಗುತ್ತಲೇ ಇವರ ತಂದೆ ಸುಬ್ಬಯ್ಯನವರು ಇವರನ್ನು ತೂನೂರಿನ ಸೇಂಟ್ ಜೋಸೆಫ್ ಸ್ಕೂಲಿಗೆ ಸೇರಿಸಿದರು. ಆದರೆ ಅಲ್ಲಿ ಅವರನ್ನು ಬ್ರಿಟೀಷ್ ಹುಡುಗರು ಅಸ್ಪೃಶ್ಯರಂತೆ ಕಾಣತೊಡಗಿದರು. ಅದು ಬ್ರಿಟೀಷ್ ಹುಡುಗರಿಗಾಗಿ ಇದ್ದ ಶಾಲೆ. ಹೀಗಾಗಿ ಮನ ನೊಂದ ತಿಮ್ಮಯ್ಯ ನವರ ತಂದೆ ಆಗಿನ ಕೊಡಗಿನ ಕಮೀಷನ್‌ರಲ್ಲಿ ದೂರಿಕೊಳ್ಳಲು ಕಮೀಷನರ್‌ರು ತಿಮ್ಮಯ್ಯನವರನ್ನು ಬೆಂಗಳೂರಿನ ಬಿಷಪ್ ಕಾಟನ್ ಸ್ಕೂಲಿಗೆ ಸೇರಿಸಿದರು. ಆದರೆ ಅಲ್ಲಿ ಸೆಂಟ್ ಜೋಸೆಫ್ ಸ್ಕೂಲಿಗಿಂತಲೂ ಹೆಚ್ಚಿನ ರೀತಿಯಲ್ಲಿ ವರ್ಣ ಭೇದ ನೀತಿ ಇತ್ತು. ತಿಮ್ಮಯ್ಯನವರು ಮೊಟ್ಟಮೊದಲು ಸ್ಕೂಲಿಗೆ ಹೊದಾಗ ಅಲ್ಲಿಯ ಒಬ್ಬ ವಿದ್ಯಾರ್ಥಿ "God, What is the School coming to When they have started taking niggers in to it!" ಎಂದನಂತೆ. ಇದರಿಂದ ರೇಗಿದ ತಿಮ್ಮಯ್ಯ ಆ ಹುಡುಗನನ್ನು ಥಳಿಸಲು ಮುಂದಾದರು.

ಆದರೆ ಮುಂದೆ ಕೆಲವೇ ದಿನಗಳಲ್ಲಿ ಇವರು ತಮ್ಮ ಅಚ್ಚುಕಟ್ಟುತನ, ಸಾಹಸಗಳಿಂದ ಅಲ್ಲಿದ್ದ ಹುಡುಗರು ಶಿಕ್ಷಕರ ಒಲವನ್ನು ಗಳಿಸಿಕೊಂಡರು. ಶಾಲೆಯ ಸ್ಕಾಟಿಗೆ ಮುಂದಾಳಾದರು. ಇವರ ವ್ಯಕ್ತಿತ್ವವನ್ನರಿತ ಅಧಿಕಾರಿಗಳು ಇವರನ್ನು Auxiliary force India ದಲ್ಲಿ ಸೇರಿಸಿದರು. ಅಲ್ಲಿ ತಿಮ್ಮಯ್ಯನವರಿಗೆ ನಿಜವಾದ ಸೈನಿಕ ಶಿಕ್ಷಣ ಕೊಡಬೇಕಾಯಿತು. ಅಲ್ಲಿದ್ದ ಯುರೂಪಿಯನ್ ವಿದ್ಯಾರ್ಥಿ ಸಮುದಾಯಕ್ಕೆ ಅವರು ನಾಯಕರಾದರು.

ಅದೇ ಆಗ ಡೆಹರಾಡೂನಿನಲ್ಲಿ ವೇಲ್ಸ ರಾಯಲ್ ಇಂಡಿಯನ್ ಮಿಲಿಟರಿ ಕಾಲೇಜ್ ಪ್ರಾರಂಭಿಸಲ್ಪಟ್ಟಿತ್ತು. ಅಲ್ಲಿ ಕೊಡಗು ಸಂಸ್ಥಾನದವರಿಗಾಗಿ ಒಂದು ಜಾಗ ಮೀಸಲಾಗಿಟ್ಟದ್ದರಿಂದ ತಿಮ್ಮಯ್ಯನವರು ಅಲ್ಲಿ ಪ್ರವೇಶ ಪಡೆದರು. ಅಲ್ಲಿ ಅವರನ್ನು ಕಿಟ್ಟರ ಮಾಸ್ಟರ್ ಎನ್ನುವವರ ಆಧಿಪತ್ಯಕ್ಕೆ ವಹಿಸಿಕೊಡಲಾಯಿತು, ತಿಮ್ಮಯ್ಯ ಹೆಸರುವಾಸಿಯಾಗಲು ಹೊತ್ತು ಹಿಡಿಯಲಿಲ್ಲ.

ಡೆಹರಾಡೂನಿನಲ್ಲಿ ಸೈನಿಕ ತರಬೇತಿ ಹೊಂದಿ ತಿಮ್ಮಯನವರು ಮೊಟ್ಟ ಮೊದಲು ಇಂಗ್ಲೆಂಡಿಗೆ ಸೇನಾಧಿಕಾರಿಯಾಗಿ ಹೊರಟಾಗ ತಮ್ಮ ನೈಜ ಜೀವನದ ಆರಂಭವಾಯಿತೆಂದು ಉದ್ಗರಿಸಿದರು.

ತಿಮ್ಮಯ್ಯನವರ ಸೈನಿಕ ಜೀವನ ಪ್ರಾರಭವಾದಾಗ ಆಗಷ್ಟೇ ಮೊದಲನೆಯ ಜಗತ್ತಿನ ಯುದ್ಧ ಕೊನೆಗೊಂಡಿತ್ತು. ಯುದ್ಧದಿಂದ ಜಗತ್ತು ತ್ರಸ್ತಗೊಂಡು ಅನೇಕ ಸೈನಿಕರು ಮೃತಪಟ್ಟಿದ್ದರು. ಭಾರತವೂ ಅನೇಕ ಸೈನಿಕರನ್ನು ಕಳೆದುಕೊಂಡಿತ್ತು. ಭಾರತವೂ ಸೇರಿ ಜಗತ್ತಿನಾದ್ಯಂತ ಉತ್ತಮ ಸೈನ್ಯಾಧಿಕಾರಿಗಳ ಆವಶ್ಯಕತೆಯುಂಟಾಗಿತ್ತು. ತಿಮ್ಮಯ್ಯನವರಿಗೆ ಸೈನ್ಯಾಧಿಕಾರಿಯ ಹುದ್ದೆ ಹುಡುಕಿಕೊಂಡು ಬಂದಿತು. ನಂತರ ಅವರನ್ನು (೧೯೧೭) ಬಗದಾದಿಗೆ ಸೈನ್ಯಾಧಿಕಾರಿಯಾಗಿ ಕಳಿಸಲಾಯಿತು.

ಬಗದಾದಿನಿಂದ ಮರಳಿದ ಮೇಲೆ ತಿಮ್ಮಯ್ಯನವರನ್ನು ಹೈದರಾಬಾದಿನ ಸೈನ್ಯಾಧಿಕಾರಿಯಾಗಿ ನೇಮಿಸಿದಾಗ ಅವರಿಗೆ ಸರೋಜಿನಿ ನಾಯಿಡುರವರೊಡನೆ ನಿಕಟ ಸಂಪರ್ಕ ವುಂಟಾಯಿತು. ಅವರಿಂದ ತಿಮ್ಮಯ್ಯ ಭಾರತದ ಸ್ವಾತಂತ್ರ ಹೋರಾಟದ ಬಗ್ಗೆ ಮತ್ತು ಗಾಂಧೀ ತತ್ವಗಳ ಬಗ್ಗೆ ವಿವರವಾಗಿ ತಿಳಿದುಕೊಂಡರು.

ತಿಮ್ಮಯ್ಯನವರೊಮ್ಮೆ ಕಾರ್ಯ ನಿಮಿತ್ತವಾಗಿ ಬೆಂಗಳೂರಿಗೆ ಹೋದಾಗ ಪ್ಯಾರಿಸ್ಸಿನ ನೀನಾ ಎನ್ನುವವಳೊಡನೆ ಭೆಟ್ಟಿಯಾಗಿ, ಪ್ರೇಮಕುದುರಿ, ಮದುವೆಯಲ್ಲಿ ಪರ್ಯಾವಸಾನಗೊಂಡಿತು. ಆಗ ತಿಮ್ಮಯ್ಯನವರಿಗೆ ೨೮ ಮತ್ತು ನೀನಾಗೆ ೧೮ ವರ್ಷ ವಯಸ್ಸು. ಭಾರತೀಯ ನೃತ್ಯ, ಸಂಗೀತಗಳೆಂದರೆ ತುಂಬಾ ಇಷ್ಟ ಪಡುತ್ತಿದ್ದ ತಿಮ್ಮಯ್ಯ ನೀನಾಗೆ ಭಾರತೀಯ ನೃತ್ಯ, ಸಂಗೀತದ ಶಿಕ್ಷಣಕೊಡಿಸಿದರು.

ಹೈದ್ರಾಬಾದಿನಿಂದ ತಿಮ್ಮಯ್ಯನವರು ಮದ್ರಾಸಿಗೆ ಹೋಗಿ ಅಲ್ಲಿ ನಾಲ್ಕು ವರ್ಷ ಸೈನ್ಯಾಧಿಕಾರಿಯಾಗಿ ಸೇವೆ ಸಲ್ಲಿಸಿದರು. ೧೯೩೯ ರಲ್ಲಿ ನೀನಾಳ ಜೊತೆ ಯುರೋಪ್ ಸಂಚಾರಕ್ಕೆ ಹೊರಡಬೇಕೆನ್ನುವಷ್ಟರಲ್ಲಿ ಯುರೋಪಿನಾದ್ಯಂತ ಯುದ್ಧದ ಕಾರ್ಮೋಡ ಮುಸುಕಿ, ಸೈನ್ಯದೊಡನೆ ಅಲ್ಲಿಗೆ ಹೋಗಬೇಕಾಗಿ ಬಂದಿತು. ಆದರೆ ತಿಮ್ಮಯ್ಯ ಸ್ವಲ್ಪವೂ ಬೇಸರಿಸದೆ ಕರ್ತವ್ಯ ಮುಖ್ಯವೆಂದು ತಿಳಿದು ಸಿದ್ಧರಾದರು. ಯುದ್ಧದ ತೀವ್ರತೆ ಭಯಂಕರವಾಗಿದ್ದರಿಂದ ಅಲ್ಲಿಗೆ ಹೋಗುವ ಯಾರೂ ಹಿಂದಿರುಗಿ ಬರುವ ಧೈರ್ಯವಿರಲಿಲ್ಲ.

ಯುದ್ಧರಂಗದಲ್ಲಿ ಜ॥ ತಿಮ್ಮಯ್ಯನವರು ತೋರಿಸಿದ ಸ್ಥೈರ್ಯ, ಸಾಹಸ ಅದ್ಭುತವಾದುದು. ಇದನ್ನು ಕಂಡು ಭಾರತ ಸರ್ಕಾರ ಯುರೋಪಿನಿಂದ ಹಿಂದಿರುಗುತ್ತಲೇ ತಿಮ್ಮಯ್ಯನವರನ್ನು ಸಿಂಗಾಪುರಕ್ಕೆ ಕಳಿಸಿತು. ೧೯೪೦ ರಲ್ಲಿ ಜಪಾನು ಸಿಂಗಾಪುರದ ಮೇಲೆ ದಾಳಿಮಾಡಿ ಅಲ್ಲಿಯ ರಬ್ಬರ್ ತೋಟಗಳನ್ನೆಲ್ಲಾ ವಶಪಡಿಸಿಕೊಂಡಿದ್ದರಿಂದ ಅದನ್ನು ರಕ್ಷಿಸುವ ಹೊಣೆ ತಿಮ್ಮಯ್ಯನವರದಾಯಿತು. ಈ ಕಾರ್ಯದಲ್ಲಿ ತಿಮ್ಮಯ್ಯ ತೋರಿದ ಸಾಹಸ ಕಂಡು ಜಗತ್ತೇ ಮೆಚ್ಚುಗೆ ವ್ಯಕ್ತಪಡಿಸಿತ್ತು. ಅಲ್ಲಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸಿ ತಿಮ್ಮಯ್ಯ ೧೯೪೧ ರ ಅಕ್ಟೋಬರ್‌ನಲ್ಲಿ ಭಾರತಕ್ಕೆ ಮರಳಿದರು.

ಅದೇ ಆಗ ಹೈದ್ರಾಬಾದಿನ ರೆಜಿಮೆಂಟನ ಟ್ರೇನಿಂಗಿಗಾಗಿ ಆಗ್ರಾದಲ್ಲಿ ಟ್ರೇನಿಂಗ್ ಸೆಂಟರ್ ಪ್ರಾರಂಭಿಸಲ್ಪಟ್ಟಿತು. ಅಲ್ಲಿಗೆ ತಿಮ್ಮಯ್ಯನವರನ್ನು ಮೇಜರ್ ಆಗಿ ಕಳಿಸಲಾಯಿತು. ತಿಮ್ಮಯ್ಯನವರು ನೀನಾ ಮತ್ತು ಮಗಳು ಮಿರೀಲೆ ಜೊತೆ ತಾಜಮಹಲಿನಿಂದ ಒಂದು ಮೈಲಿ ಅಂತರದ ಮೇಲಿದ್ದ ಸುಂದರ ಬಂಗಲೆಯಲ್ಲಿ ವಸತಿ ಹೂಡಿದರು.

ಆಗ್ರಾದಿಂದ ಅನಂತರ ಅವರನ್ನು ಸೇನಾಧಿಪತಿಯಾಗಿ ಬರ್ಮಾಕ್ಕೆ ಕಳಿಸಲಾಯಿತು. ಜಪಾನಿಯರಿಂದ ಆಕ್ರಮಿಸಲ್ಪಟ್ಟ ಬರ್ಮಾದ ದಟ್ಟಾರಣ್ಯವನ್ನು ರಕ್ಷಿಸುವುದು ಸುಲಭವಾದ ಮಾತಾಗಿರಲಿಲ್ಲ. ಮರಾಠ ಲೈಟ್ ಇನ್ಫಂಟರಿ ತುಕಡಿಯೊಡನೆ ತಿಮ್ಮಯ್ಯನವರು ಜಪಾನಿ ಸೇನೆಯನ್ನು ಧೀರೋದಾತ್ತವಾಗಿ ಎದುರಿಸಿದರು.

ಕಾಶ್ಮೀರದ ರಕ್ಷಣೆಯಲ್ಲಿ ಜ॥ ತಿಮ್ಮಯ್ಯನವರಿಗೆ ಸಾಹಸ ಮೆಚ್ಚುವಂತಾದ್ದು. ೮೧,೦೦೦ ಚ. ಮೈ. ವಿಸ್ತಾರವಾದ ಆ ಪ್ರದೇಶದ ರಕ್ಷಣೆಗಾಗಿ ತಿಮ್ಮಯ್ಯ ಅವಿರತವಾಗಿ ದುಡಿದಿದ್ದಾರೆ. ೧೯೪೯ ರಲ್ಲಿ ಪಾಕೀಸ್ಥಾನ ಆ ಪ್ರದೇಶವನ್ನು ಕಬಳಿಸಲು ಯತ್ನಿಸಿದಾಗ ಅದನ್ನು ತಪ್ಪಿಸಿದ ಕೀರ್ತಿ ತಿಮ್ಮಯ್ಯನವರದು.

ಅನಂತರ ತಿಮ್ಮಯ್ಯನವರನ್ನು ಡೆಹರಾಡೂನಿನ ಮಿಲಿಟರಿ ಕಾಲೇಜಿನ ಕಮಾಂಡೆಂಟರಾಗಿ ನೇಮಿಸಲಾಯಿತು. ಆಗ ಅವರು ಜ॥ ಕಾರಿಯಪ್ಪನವರೊಡನೆ ಕಾಮನ್ವೆಲ್ಥ ಪರಿಷತ್ತಿಗೆಂದು ಇಂಗ್ಲೆಂಡಿಗೆ ಹೋಗಿ ಬಂದರು.

ಡೆಹರಾಡೂನಿನಿಂದ ದಿಲ್ಲಿಯ ಆರ್ಮಿ ಕ್ವಾರ್ಟರ್ ಮೇಜರ್ ಜನರಲ್ ಆಗಿ, ನಂತರ ೧೯೫೩ ರಲ್ಲಿ ಲೆಪ್ಟ

ನೆಂಟ್ ಜನರಲ್ ಆಗಿ ನೇಮಕಗೊಂಡರು. ಈ ಅವಧಿಯಲ್ಲಿ ಭಾರತದ ಸಂರಕ್ಷಣ ಮಂತ್ರಿಯೊಡನೆ ಕಾಶ್ಮೀರ ಸಮಸ್ಯೆಯ ಚರ್ಚೆಗಾಗಿ ಲಂಡನ್ನಿಗೆ ಹೋಗಿ ಬಂದರು

ಎರಡನೇ ಜಾಗತಿಕ ಯುದ್ಧ ಮುಗಿದ ಸ್ವಲ್ಪೇ ದಿನದಲ್ಲಿ ಕೋರಿಯಾ ಯುದ್ಧ ಪ್ರಾರಂಭವಾಯಿತು. ರಶಿಯಾ ತನ್ನ ಸೇನೆಯನ್ನು ಉತ್ತರ ಕೋರಿಯಾದಿಂದ ಮತ್ತು ಅಮೇರಿಕ ದಕ್ಷಿಣ ಕೋರಿಯಾದಿಂದ ಹಿಂತೆಗೆದುಕೊಳ್ಳಬೇಕೆಂದು ನಿಶ್ಚಯವಾಗಿದ್ದರೂ ಮುಂದೆ ರಶಿಯಾ ಹಾಗೆ ನಡೆದುಕೊಳ್ಳದೆ ದಕ್ಷಿಣ ಕೋರಿಯಾವನ್ನು ಆಕ್ರಮಿಸತೊಡಗಿದ್ದರಿಂದ ಅದನ್ನು ತಡೆಗಟ್ಟಲು ವಿಶ್ವಸಂಸ್ಥೆಯು ತನ್ನ ೧೬ ರಾಷ್ಟ್ರಗಳ ಸೇನೆಯನ್ನು ಜ|| ತಿಮ್ಮಯ್ಯನವರ ನೇತೃತ್ವದಲ್ಲಿ ಕಳಿಸಿತು. ಅಲ್ಲಿ ಶಾಂತಿ ಸ್ಥಾಪಿಸಲು ವಿಶ್ವಸಂಸ್ಥೆಯ ಸೇನೆಗೆ ಹದಿನೈದು ತಿಂಗಳು ಬೇಕಾದವು. ಜ|| ತಿಮ್ಮಯ್ಯನವರು ಎಸಗಿದ ಅಮೋಘ ಸೇವೆಯಿಂದ ವಿಶ್ವಕ್ಕೆ ಮೆಚ್ಚಿಗೆಯಾದರು.

ಅನಂತರ ತಿಮ್ಮಯ್ಯನವರ ಸೇವೆಯನ್ನು ೧೯೫೫ ರಲ್ಲಿ ಪಾಕೀಸ್ಥಾನದ ಪುಂಡಾಟವಡಗಿಸಲು, ೧೯೫೭ ರಲ್ಲಿ ನಾಗ ಬಂಡುಗಾರರ ಬಂಡನ್ನು ಹತ್ತಿಕ್ಕಲು ಬಳಸಲಾಯಿತು.

೧೯೫೭ ರಲ್ಲಿ ( ಮೇ ೮ ) ಜ|| ತಿಮ್ಮಯ್ಯನವರು ಭಾರತದ ಸೇನಾಪಡೆಯ ವರಿಷ್ಟರಾಗಿ ನೇಮಕಗೊಂಡರು. ೩೧ ವರ್ಷಗಳ ಸಾರ್ಥಕ ಸೇವೆಯ ಬಳಿಕ ಅವರಿಗೆ ದೊರಕಿದ ಅತ್ಯುನ್ನತ ಹುದ್ದೆ ಇದು. ಇವರ ಹಿರಿತನದಲ್ಲಿ ಭಾರತೀಯ ಸೈನಿಕರು ಉತ್ಸಾಹಭರಿತರಾದರು.

೧೯೬೧ ರಲ್ಲಿ ತಿಮ್ಮಯ್ಯ ನಿವೃತ್ತರಾಗಿ ತಾಯ್ನಾಡಾದ ಕೊಡಗಿಗೆ ಬಂದು ವಿಶ್ರಾಂತಿ ಪಡೆಯತೊಡಗಿದರು. ಆದರೆ ಕರ್ತವ್ಯ ಅವರನ್ನು ಆಗಲೂ ಸುಮ್ಮನೆ ಕುಳಿತುಕೊಳ್ಳಲು ಬಿಡಲಿಲ್ಲ. ವಿಶ್ವಸಂಸ್ಥೆ ತನ್ನ ಸೇನಾಘಟಕದ ಮುಖ್ಯಸ್ಥರಾಗಿ ಸೈಪ್ರಸ್‌ಗೆ ಹೋಗಲು ಕೇಳಿಕೊಂಡಾಗ ಅವರು ಸಿದ್ಧರಾದರು. ಅಲ್ಲಿ ಅವರು ಕೊನೆಯುಸಿರೆಳೆಯುವವರಿಗೂ ( ೧೮-೧೨-೧೯೬೫ ) ಕರ್ತವ್ಯದಲ್ಲಿ ನಿರತರಾಗಿದ್ದರು.

ತಿಮ್ಮಯ್ಯನವರ ಹಿರಿಯ ಸೇವೆಗೆ ಮೆಚ್ಚಿದ ಭಾರತ ಸರ್ಕಾರ ಇವರನ್ನು "ಪದ್ಮಭೂಷಣ" ಪ್ರಶಸ್ತಿ ನೀಡಿ ಗೌರವಿಸಿದೆ. ಸೈನಿಕರಿಗಿಯೂ, ಸಾಮಾನ್ಯ ಜನತೆಯ ಪ್ರೀತಿಯನ್ನು ಗಳಿಸಿದ ಜ|| ತಿಮ್ಮಯ್ಯ ಕರ್ನಾಟಕದ ಸತ್ಪುತ್ರರಲ್ಲಿ ಒಬ್ಬರು.

---

★ ಹರ ತನ್ನ ರೂಪವ ತೋರಬೇಕೆಂದು
ಶ್ರೀ ಗುರು ರೂಪಾಗಿ ಮರ್ತ್ಯಕ್ಕೆ ಬಂದು,
ಮನಸ್ಥಲಕೆ ಮಂತ್ರವಾದ, ತನುಸ್ಥಲಕ್ಕೆ ಪ್ರಸಾದವಾದ;
ಕರಸ್ಥಲಕೆ ಲಿಂಗವಾದ, ಪ್ರಾಣಸ್ಥಲಕ್ಕೆ ಜಂಗಮನಾದ;
ಇಂತೀ ಚತುರ್ವಿಧ ಸ್ಥಲದಲ್ಲಿ ಸಾಹಿತ್ಯನಾದನಯ್ಯಾ,
ಕೂಡಲ ಸಂಗಯ್ಯನಲ್ಲಿ ಬಸವಣ್ಣನು.

—ಚನ್ನಬಸವಣ್ಣ

★ ಪಂಚ ವಿಧವೇ ಪಂಚ ಬ್ರಹ್ಮವೆಂದು ಅರುಹಿದ
ಮಹಾ ಮಹಿಮ ಸಂಗನ ಬಸವಣ್ಣನು
ಎನಗೆಯೂ ಗುರು, ನಿನಗೆಯೂ ಗುರು
ಜಗವೆಲ್ಲಕ್ಕೆಯೂ ಗುರು ಕಾಣಾ, ಗುಹೇಶ್ವರ

—ಪ್ರಭುದೇವ



## ಕಾವ್ಯವಾಹಿನಿ



## ಸಿದ್ಧಗಂಗಾ

—ಪ್ರಾ. ಬಂ. ರಂ. ಸರ್‌ಮೊಕದ್ದಂ.

ಓ! ಸಿದ್ಧಗಂಗಾ
ಜನ ತಾಪ ಕಳೆಯಲು
ಜನ ಪಾಪ ತೊಳೆಯಲು
ನೀ ಸದಾ ಸಿದ್ಧ,'ಗಂಗಾ'
ತವ ಜ್ಞಾನ ಹೊನಲಿನಲಿ
ಸುವಿಚಾರ ಬಿಂದುಗಳ
ಸಮಸಿಖತ ನಾ ಬರಲು
ಇದೋ ಸಿದ್ಧ, 'ಸಿದ್ಧಗಂಗಾ'
ನೂರಾರು ವಿಷಯಗಳ
ಅಲೆಗಳಲಿ ತುಂಬಿಹುದು
ಪಾವನವು ಅಂತರಂಗ
ತನು ಕೊಳಗೆ ಆ ಗಂಗಾ
ಮನಕೊಳಗೆ ನೀ ಗಂಗಾ
ಎಂದಿಗೂ ನನಗಿರಲಿ ನಿನ್ನ ಸಂಗಾ

ಸಿದ್ಧಗಂಗಾ ಇದು ಶುದ್ಧಗಂಗಾ
ಜೀವ ಕೋಟಿಗೆ ಇದು ಮುಕ್ತಿರಂಗ ||
ಮೇಲುಕೀಳೆಂಬ ಭಾವವ ತೊರೆದ ರಂಗ
ಪಾಪಲೇಪವ ತೊಳೆವ ಪುಣ್ಯಗಂಗಾ
ಜಾತಿ ಮತ ಪಂಥಗಳಿಗಿರದಿಲ್ಲಿ ಸಂಗ
ಜ್ಯೋತಿಯೊಲು ಬೆಳಗುತಿದೆ ಶ್ರಿ ಸಿದ್ಧಗಂಗಾ||
ಇಲ್ಲಿ ನೆಲಸಿಹ ಸ್ವಾಮಿ ಸಿದ್ಧಲಿಂಗೇಶ
ಭಕ್ತ ಜನತೆಗೆ ಮುಕ್ತಿ ಈವ ಪರಮೇಶ
ಯುಗಯುಗದಿ ಅವನಿಗೆ ವಾಸ ಕೈಲಾಸ
ಕಲಿಯುಗದಿ ಬಂದಿಹನು ಇರೆ ಇಲ್ಲಿವಾಸ ||
ಕಲ್ಯಾಣ ಪುರಿ ಅಂದು ಹಾಳಾಯಿತೇನು ?
ಇಲ್ಲ, ಅದು ಸುಳ್ಳು ಬಾ ಇಲ್ಲಿಹುದು ಕಾಣು
ಬಸವ ಅಲ್ಲಮರಿವರೆ ಶ್ರಿ ಸ್ವಾಮಿದ್ವಯರು
ಜೀವನವೇ ಜನತೆಗೆ ಮುಡುಪೆನ್ನುತಿಹರು ||
ನಿತ್ಯ ನಡೆದಿದೆ ಮಹಾಮನೆಯ ದಾಸೋಹ
ಭಕ್ತ ಜನತೆಗೆ ಇಲ್ಲಿ ಇರದಾವ ಮೋಹ

## ಪರವಶ

—ಕೆ. ಎಸ್. ರಾಜ (ನಂದಿ)

ನಾನು:
ನನ್ನ ಜೀವನದ ತಾರೀಖಿನ
ಗಟ್ಟಿಯಿಂದ ಒಂದೊಂದು
ಕಿತ್ತೆ; ಕಿತ್ತುತ್ತೇನೆ
ನೀ ಇವುಗಳನ್ನು ಕಿತ್ತಬಹುದಷ್ಟೇ....
ಆದರೆ:
ಕೂಡಿಸಲಾಗದು.
ಬಿಟ್ಟಿದ್ದು; ಬಿದ್ದದ್ದು ಕಟ್ಟಬಹುದೆಂದು
ಅನೇಕರು ಕಡ್ಡಿ ಮುರಿದು; ನಗಾರಿ
ಹೊಡೆ; ಹೊಡೆದು ಹೇಳುತ್ತಾರೆ....
ಹೊರತು ಎನೂ ಮಾಡುವುದಿಲ್ಲ
ಲೆಕ್ಕ ಹಾಕಿದಷ್ಟು ಜೀವನದ
ತಿಳಿ ನೀರಿನ ಕೊಡದಲ್ಲಿ ಕೈ ಹಾಕಿ
ಕಲಕೆ ತಿಳಿ ನೀರನ್ನು ಹೊಂಡ
ನೀರನ್ನಾಗಿಸಿ ಮೆಲ್ಲನೆ ಸೂರ್ಯ
ಬಂದು ಚಾರ್ಜ ತೆಗದುಕೊಂಡಾಗ
ನಗುವಿನರಸ ಚಂದ್ರಾ ಹೊರಟು
ಹೋದಂತೆ. ನನ್ನ ಜಾಗವನು ಹೆಂಡಿ
ರೀಡಿ ಹಾಕಿ ಸಾರಿಸಿ ಬೇರೆಯವರಿಗೆ
ಚಾನ್ಸ್‌ಗೆ ಅನುವು ಮಾಡಬೇಕಲ್ಲವೆ ?

---

ಎಲ್ಲೆಡೆಯು ಹರಿಯುವುದು ಹೊಳೆಯಾಗಿ ಹರುಷ
ಕಾಣ ಬಾಇಲ್ಲಿ ಎಣಿಸದೆ ವಿಾನಮೇಷ ||
ಬಡವ ಬಲ್ಲಿದರೆಂಬ ಭೇದವಿಲ್ಲಿಲ್ಲ
ಆಸೆ ಆಮಿಷಗಳ ಸುಳಿವು ಸುಳಿದಿಲ್ಲ
ಯಾವುದಕ್ಕೂ ಇಲ್ಲಿ 'ಇಲ್ಲ' ಎಂಬುದೇ ಇಲ್ಲ
ಸದ್ದುಗದ್ದಲವಿಲ್ಲದೆ ನಡೆದಿಹುದು ಎಲ್ಲ ||
ಜ್ಞಾನದೊರತೆಯೇ ಉಕ್ಕಿ ಹರಿಯುತಿದೆ ಇಲ್ಲಿ
ನಾಡ ಕಟ್ಟುವ ಶಕ್ತಿ ಬೆಳೆಯುತ್ತಿದೆ ಇಲ್ಲಿ
ಭಕ್ತಿ ಮಡುವಾಗಿಹುದು ಶ್ರಿ ಕ್ಷೇತ್ರದಲ್ಲಿ
ಇಲ್ಲಿರದ ಮುಕ್ತಿ ಇನ್ನಿಹುದು ಮತ್ತೆಲ್ಲಿ ? —

—ನಂ. ಶಿವಗಂಗಪ್ಪ

# ಚಂಡಮಾರುತ-ಒಂದು ಶಾಪವೆ?

—ಚೆ. ಗೋ. ರಮೇಶ್

ಪ್ರಸನ್ನ—ಪ್ರಕೋಪಗಳೆರಡೂ ಪ್ರಕೃತಿಯ ಪ್ರವೃತ್ತಿಗಳೇ ಅವುಗಳಲ್ಲಿ ಒಂದು ವರವಾದರೆ ಮತ್ತೊಂದು ಶಾಪವೆನಿಸುತ್ತದೆ. ಇಂಥ ಶಾಪಗಳು ಅನೇಕ. ಅದರಲ್ಲಿ ಬಿರುಗಾಳಿಯೂ ಒಂದು. ಅದರ ಬೀಸುವಿಕೆಗೆ ಕಾರಣ; ಉಂಟಾಗುವ ಹಾನಿ ಮತ್ತು ಪರಿಹಾರ ಕ್ರಮಗಳನ್ನು ಮಾನ್ಯರು ಇಲ್ಲಿ ನಿರೂಪಿಸಿದ್ದಾರೆ.

—ಸಂ

ಪ್ರಕೃತಿ ಮಾನವನಿಗೆ ಒಂದು ವರ. ಪ್ರಕೃತಿ ಜೀವನ ಎಂದು ಕರೆಯುವುದು ವಾಡಿಕೆ. ಅದನ್ನೆದುರಿಸಿ ಅವನು ಎಂದೂ ಬದುಕಲಾರ. ಆದರೆ ಪ್ರಕೃತಿಯೇ ನಮಗೆದುರಾದಾಗ ಅಂದರೆ ವಿಕೃತಿ ರೂಪತಾಳಿದಾಗ ಅದು ನಮಗೆ ಶಾಪವಾಗಿ ಪರಿಣಮಿಸುತ್ತದೆ. ಇಂಥಾ ಶಾಪಗಳು ಅನೇಕ. ಇವುಗಳಲ್ಲಿ ನಾವು ಪ್ರತಿವರುಷ ಅನುಭವಿಸುತ್ತಿರುವ ಆದರಲ್ಲೂ ಕಳೆದ ನವಂಬರ್, 1977 ರಲ್ಲಿ ಎದುರಿಸಬೇಕಾಗಿ ಬಂದ ಚಂಡಮಾರುತವೂ ಒಂದು. ಜನಸಾಮಾನ್ಯರ ಬಳಕೆಯಲ್ಲಿ ಇದು 'ಸೈಕ್ಲೋನ್' ಎಂದು ಹೆಸರು ಪಡೆದಿದೆ. ಬಿರುಗಾಳಿ, ಸುಂಟರಗಾಳಿ, ಸುಳಿಗಾಳಿ, ಸೀಳುಗಾಳಿ ಎಂತೆಲ್ಲ ಹೆಸರುಗಳನ್ನು ಪ್ರಯೋಗಿಸುವುದು ಸಾಮಾನ್ಯ. ಗಾಳಿಯ ವೇಗಕ್ಕನುಗುಣವಾಗಿ ಅವುಗಳನ್ನು ಗುರುತಿಸುವುದೂ ಆಗಿದೆ. ಸೀಳುಗಾಳಿಯಂತಗಾಳಿ 200 ಮೀಟರ್ ಅಗಲದ ಪ್ರದೇಶದಲ್ಲಿ ಹಾದು ಹೋದರೂ ಎದುರಿಗೆ ಸಿಕ್ಕ ಏನೊಂದು ವಸ್ತುವೂ ಉಳಿಯುವಂತಿಲ್ಲ. ಮದಗಜದ ಕಾಲ್ತುಳಿತಕ್ಕೆ ಸಿಕ್ಕಂತವರ ಪಾಡಾದಂತೆ. ಚಂಡಮಾರುತದಿಂದ ಉಂಟಾದ, ಉಂಟಾಗುತ್ತಿರುವ ನಷ್ಟಗಳು ಅಷ್ಟಿಷ್ಟಲ್ಲ. ಅದು ಒದಗಿದ ಕಡೆ ಸಂಪೂರ್ಣ ಬೆಳೆಗಳ ನಾಶ, ಜನಹಾನಿ, ಸ್ಥಿರಾಸ್ತಿರಗಳ ನಷ್ಟ, ಹಳ್ಳಿ ಹಳ್ಳಿಗಳೇ ಉಂಟಾದ ಜಲಪ್ರಳಯದಲ್ಲಿ ಮುಳುಗಿಹೋಗುವಿಕೆ ಇತ್ಯಾದಿ ಎಷ್ಟೋ.

ಪ್ರತಿವರುಷ ಸೈಕ್ಲೋನ್ ತಪ್ಪಿದ್ದಲ್ಲ. ಬಿರುಗಾಳಿ ಸಾಧಾರಣ 1000 ಮೈಲಿ ವಿಸ್ತಾರದವರೆಗೆ ಸಂಚರಿಸಿ ಹಾವಳಿ ಎಬ್ಬಿಸುತ್ತದೆ. ಇಂಥ ಉತ್ಪಾತಗಳಿಂದ ಹಡಗು ವಿಮಾನಗಳ ಚಲನೆಗಳಿಗೆ ಬಹಳ ಅಪಾಯ. ಈ ಸೈಕ್ಲೋನ್ ಶಬ್ದದ ಬಳಕೆ ಮೊದಲಿಗೆ ಕ್ರಿ. ಶ. 1848 ರಲ್ಲಿ ಕಲ್ಕತ್ತೆಯ ಕ್ಯಾಪ್ಟನ್ ಹೆನ್ರಿ ಪೆಡಿಂಗ್‌ಟನ್‌ರವರಿಂದ ಆಯಿತನ್ನಬೇಕು. ಸುರುಳಿಯಾಗಿ ಸುತ್ತಿ ಕೊಂಡಿರುವ ಹಾವು ಎಂಬೀ ಅರ್ಥಕೊಡುವ ಸೈಕ್ಲೋನ್‌ನ ಗಾಳಿ ಹಾವಿನಷ್ಟೆ ವಿಷಪೂರಿತ. ಹಾವಾದರೂ ಕಚ್ಚಬೇಕು ಸಾಯುವುದಕ್ಕೆ; ಆದರೆ ಸೈಕ್ಲೋನ್ ಹಾದರೂ ಪರಿಣಾಮ ಘೋರ, ಕಲ್ಪನಾತೀತ.

ನೆಲದ ಒಂದು ಕಡೆ ಹೆಚ್ಚಾಗಿಯೂ ಮತ್ತೊಂದು ಕಡೆ ಕಡಮೆಯಾಗಿಯೂ ಬಿಸಿಯಾಗಿ ಬೇರೆ ಬೇರೆ ಉಷ್ಣತೆ (Temperature) ಗಳುಳ್ಳ ಎರಡು ಗಾಳಿಗಳು ಕೂಡಿ ಇಂಥ ಉತ್ಪಾತಗಳಾಗುತ್ತವೆ ಎಂದು ಹೇಳುತ್ತಾರೆ. ಇದು ಒಂದು ಮತ. ಉಷ್ಣವಲಯ ಸಾಗರದಲ್ಲಿನ ವಾತಾವರಣದಲ್ಲಿ ಒತ್ತಡ ಕಡಿಮೆಯುಂಟಾದಾಗ ಚಂಡಮಾರುತಗಳು ಜನಿಸುತ್ತವೆ ಎಂಬುದು ಸ್ಪಷ್ಟವಾಗಿದೆ. ಸಮುದ್ರ ಪ್ರದೇಶದಲ್ಲಿನ ಬೀಸುವ ಗಾಳಿಯಾದಲ್ಲಿ ಅದರೊಡನೆ ನೀರಿನ ತೇವವೂ ಸೇರಿಕೊಂಡು ಬಿರುಗಾಳಿ ಬರುವಾಗ ಜಡಿಮಳೆಯೂ ಬರುತ್ತದೆ. ಒತ್ತಡ ಇಳಿದಂತೆ ಚಂಡಮಾರುತ ರೂಪುಗೊಂಡು ಗಾಳಿಯು ಚಲಿಸುವ ದಿಕ್ಕು ಬದಲಾಯಿಸುತ್ತದೆ. ಮುಂದೆ ಚಂಡಮಾರುತ ವೃದ್ಧಿಸಿ ಗಾಳಿ ಬಲದಿಂದ ಎಡಕ್ಕೆ ಸುತ್ತಲಾರಂಭಿಸಿ ಪರಿಣಾಮವಾಗಿ ಭಾರಿ ಮಳೆಯಾಗುತ್ತದೆ. ಗಾಳಿಯ ವೇಗ ಗಂಟೆಗೆ 60 ಕಿಲೊಮೀಟರ್ ಇರುತ್ತದೆ. ಗಾಳಿ ಸಮುದ್ರದ ಮೇಲೆ ಚಲಿಸಲಾರಂಭಿಸಿ ಅದರ ವೇಗ ಗಂಟೆಗೆ ಸುಮಾರು 120 ಕಿಲೋಮೀಟರುವರೆಗೂ ಹೆಚ್ಚಿ ಚಂಡಮಾರುತ ತನ್ನ ಮಹೋನ್ನತ ಸ್ಥಿತಿಯನ್ನು ಮುಟ್ಟುತ್ತದೆ. ನಂತರ ಕ್ರಮವಾಗಿ ಇಳಿಮುಖವಾಗಿ ಚದುರುತ್ತದೆ. ಭೂಪ್ರದೇಶವನ್ನು ತಲುಪಿ ಬೆಟ್ಟ ಗುಡ್ಡಗಳು ಅಡ್ಡಿಯಾದಂತೆ ಸಮುದ್ರದಲ್ಲಿ ಪೂರೈಕೆಯಾಗುತ್ತಿದ್ದ ತೇವಾಂಶ ಕಡಿಮೆಯಾಗಿ ಅದು ದುರ್ಬಲಗೊಳ್ಳುತ್ತದೆ. ಸಾಮಾನ್ಯವಾಗಿ ಚಂಡಮಾರುತ ವಕ್ರಾಕಾರದಲ್ಲಿ ಚಲಿಸುತ್ತದೆಯಲ್ಲದೆ ಕೆಲವೊಮ್ಮೆ ಅಡ್ಡಾದಿಡ್ಡಿ ಸಾಗುತ್ತದೆ. ಚಂಡಮಾರುತ ಹಾನಿ ಉಂಟುಮಾಡುವುದು ತನ್ನ ಉತ್ತುಂಗಸ್ಥಿತಿಯಲ್ಲೇ ಎನ್ನಬಹುದು.

## ಚಂಡಮಾರುತ 1977

ಇತ್ತೀಚೆಗೆ ಬೀಸಿದ ಚಂಡಮಾರುತದ ಬಲೆಗೆ ಸಿಕ್ಕವರು ಆಂಧ್ರಪ್ರದೇಶ, ಕೇರಳ, ತಮಿಳುನಾಡು ಹಾಗೂ ಪಾಂಡಿಚೇರಿ ಪ್ರದೇಶದವರು. ಕರ್ನಾಟಕದಲ್ಲಿ ಅದರ ಆಟ ಏನೂಸಾಗದಾಗಿದ್ದು ಅದು ದುರ್ಬಲಗೊಳ್ಳುತ್ತ ಹೋದುದರ ಪರಿಣಾಮ. ನಮ್ಮ ನೆರೆರಾಜ್ಯಗಳಲ್ಲಿ ಹಾನಿಗೀಡಾದವರ ಸಂಖ್ಯೆ ಲಕ್ಷಕ್ಕೂ ಹೆಚ್ಚು ಸತ್ತವರ ಸಂಖ್ಯೆ ಸುಮಾರು ಹತ್ತು ಸಾವಿರ. ಲಕ್ಷಾವಧಿ ಜನರು ಮನೆಗಳಿಲ್ಲದವರಾದರು. ಹಿಡೀ ಹಳ್ಳಿಗಳೇ ಉಂಟಾದ ಜಲಪ್ರಳಯದಲ್ಲಿ ಮುಳುಗಿಹೋದವು. ಬತ್ತ, ಬಾಳೆ ಕಬ್ಬು ಮೊದಲಾದ ಬೆಳೆಗಳು ಸಂಪೂರ್ಣನಾಶವಾದವು- ನೆಲದಲ್ಲಿ ಪ್ರವಿಸಿಹೋದ ಉಪ್ಪು ಮುಂದೆ ಅಂಥ ಪ್ರದೇಶದಲ್ಲಿ ಎಷ್ಟೋ ವರ್ಷಗಳವರೆಗೆ ಬೆಳೆ ಬೆಳೆಯಲು ಅಡ್ಡಿಯುಂಟುಮಾಡಬಹುದು. ಚಂಡಮಾರುತದಿಂದುಂಟಾದ ನೀರಿನ ಪ್ರವಾಹದಲ್ಲಿ ಎಷ್ಟೋ ಹಸು, ಕುರಿ, ಹಂದಿ, ಎಮ್ಮೆ, ನಾಯಿ ಮೊದಲಾದ ಸಾಕುಪ್ರಾಣಿಗಳ ದೇಹಗಳು ತೇಲಾಡಿದವು. ಇಂತಹ ವಿಪತ್ಕಾರಕ ಪರಿಣಾಮ ಊಹಿಸಲೂ ಶಕ್ಯವಲ್ಲದ್ದು. ಪ್ರಭಲವಾದ ಗಾಳಿ ಇಷ್ಟು ಹಾನಿ ಉಂಟುಮಾಡಿದೆ. ಎಂದಾಗ ಅದರ ಬಗ್ಗೆ ನಾವೆಷ್ಟು ಎಚ್ಚರದಿಂದಿರಬೇಕು ಎನ್ನುವುದು ಗಮನಕ್ಕೆ ಬರುವುದಿಲ್ಲವೆ ? ವಿಪತ್ತುಂಟಾದ ಮೇಲೆ ಎಷ್ಟೇ ಪರಿಹಾರೋಪಾಯಗಳನ್ನು ಕಾರ್ಯರೂಪಕ್ಕೆ ತರುವುದಾದರೂ ಉಂಟಾದ ನಷ್ಟಗಳನ್ನು ತುಂಬಲಾರೆವು. ಪರಿಹಾರ ಕೊಡಬೇಕಾದುದಂತೂ ಅಗತ್ಯ. ಪ್ರವಾಹಪೀಡಿತರಿಗೆ ನೆರವಾಗುವುದು ಪುಣ್ಯಕಾರ್ಯದಲ್ಲಿ ಭಾಗಿಯಾದಂತೆ. ಆದರೆ ವೈಜ್ಞಾನಿಕವಾಗಿ ನೋಡಿದಾಗ, ಹಲವಾರು ಜೀವಿಗಳ ಸಾವು ಹಾಗು ಆಸ್ತಿಪಾಸ್ತಿಗಳ ಹಾನಿಗಿಂತ ಮುಖ್ಯವಾಗಿ ಚಂಡಮಾರುತದಿಂದ ಇಷ್ಟೊಂದು ಹಾನಿ ಉಂಟಾಗುವುದನ್ನು ತಡೆಯಬಹುದಿತ್ತಲ್ಲನೆಂಬುದೇ. ಮನುಷ್ಯ ಜನಾಂಗ ಜಡವಾದರೆ ಅಪಾಯ ಎದುರಿಸಲಾರ.

ಚಂಡಮಾರುತಗಳನ್ನು ನಿಯಂತ್ರಿಸಲು ಸಾಕಷ್ಟು ಪ್ರಯತ್ನಗಳು ಆಗಿಲ್ಲ ನಿಜ. ಆದರೆ ಇಂದು ಅತ್ಯಾಧುನಿಕ ಉಪಕರಣಗಳ ಸಹಾಯದಿಂದ ಅವುಗಳ ಹುಟ್ಟು, ಗಾಳಿ ಗತಿಸುವ ದಿಕ್ಕು ಹಾಗೂ ಅದರ ಪ್ರಭಲತೆಗಳನ್ನು ಮೊದಲೇ ತಿಳಿಯಬಹುದಾಗಿದೆ. ಭಾರತೀಯ ಹವಾಮಾನ ಇಲಾಖೆ ಅದೇ ಕೆಲಸಕ್ಕಾಗಿ ಶಕ್ತಿಯುತ ರಾಡಾರ್‌ಗಳನ್ನು ಸ್ಥಾಪಿಸಿದೆ. ಈಗಾಗಲೆ ಚಂಡಮಾರುತ ಬೀಸಬಹುದಾದ ಪ್ರದೇಶಗಳಾದ ಕಲ್ಕತ್ತ, ಮದ್ರಾಸ್ ವಿಶಾಖ ಪಟ್ಟಣಗಳಲ್ಲಿ ಅವುಗಳ ಸ್ಥಾಪನೆಯಾಗಿದೆ. ಎರಡು ದಿನಗಳಿಗೆ ಮೊದಲೇ ಚಂಡಮಾರುತ ಬೀಸುವುದನ್ನು ಪತ್ತೆಹಚ್ಚಬಹುದಾಗಿದೆ. ಈ ದಿಶೆಯಲ್ಲಿ ಸಾಕಷ್ಟು ಮುಂಜಾಗರೂಕತೆ ಬಹು ಅಗತ್ಯವಾಗಿದೆ.

ಕ್ರಿ. ಶ. 1864 ರಲ್ಲಿ ಬೀಸಿದ ಚಂಡಮಾರುತದ ಪ್ರಬಲತೆಯಾಗಿಂದಾಗಿ ಸುಮಾರು 50000 ಜನರು ಅಸುನೀಗಿದರು. ಸಹಸ್ರಾವಧಿ ಜನ ರೋಗಗಳಿಗೀಡಾದರು. ಕ್ರಿ. ಶ 1942 ರಲ್ಲಿ ಬಂಗಾಲದಲ್ಲುಂಟಾದ ಬಿರು

ಗಾಳಿ ಮಿಡ್ನಾಪುರ ಹಾಗೂ ಇತರ ಜಿಲ್ಲೆಗಳ ಸುಮಾರು 50000 ಜನರನ್ನು ಕಬಳಿಸಿತು. ಪಶು ಪಕ್ಷಿಗಳು ನಾಶವಾದವು. ಹೀಗೆ ಚಂಡಮಾರುತಗಳು ಸಾಧಾರಣವೂ ಕೆಲವು ಬಾರಿ ಪ್ರಬಲವೂ ಆಗಿದ್ದು ಅಪಾರ ಹಾನಿ ಉಂಟುಮಾಡುತ್ತಲೇ ಇವೆ. ಕರಾವಳಿ ಪ್ರದೇಶದ ಜನರು ತತ್ತರಿಸಿಹೋಗುತ್ತಾರೆ. ಬೆಸ್ತರ ಪಾಡಂತೂ ಬೇಡ.

### ಪರಿಹಾರಗಳು

ತುರ್ತು ಕ್ರಮಗಳನ್ನು ಕೈಕೊಂಡು ಹಾನಿಗೊಳಗಾದ ಜನರಿಗೆ ಸಹಾಯ ಮಾಡುವುದು ನಡೆದಿದೆ. ಆಶ್ರಯ, ಆಹಾರ, ವಸ್ತ್ರದಾನ ಇತ್ಯಾದಿ ಕಾರ್ಯಕ್ರಮಗಳು ಜರುಗಿವೆ. ಪರಿಹಾರ ನಿಧಿಕೂಡಿಸುವ ಕಾರ್ಯವನ್ನು ದೊಡ್ಡ ಸಂಸ್ಥೆಗಳು, ಪತ್ರಿಕಾಲಯಗಳು, ವಿದ್ಯಾರ್ಥಿ ಮಂಡಲಿಗಳು, ಬ್ಯಾಂಕುಗಳು, ಖಾಸಗಿ ಆಸಕ್ತರೂ, ಅಭಿಮಾನಿಗಳೂ ಕೈ ಕೊಂಡಿದೆ. ಹಲವಾರು ಸಂಸ್ಥೆ, ಕಾರ್ಖಾನೆಗಳ ಉದ್ಯೋಗಿಗಳು ತಿಂಗಳ ಸಂಬಳದ ಒಂದು ದಿನದ ಸಂಬಳವನ್ನು ಈ ಕಾರ್ಯಕ್ಕೆ ಕೊಟ್ಟಿದ್ದಾರೆ. ಎಲ್ಲವೂ ತ್ವರಿತವಾಗಿ ನಡೆದಿದೆ. ಹಾನಿಗೊಳಗಾದ ಎಲ್ಲರ ಕ್ಷೇಮಪಾಲನೆಗೋಸ್ಕರ ರಾಜ್ಯ ಸರ್ಕಾರಗಳು ಮುಂದಾಗಿವೆ. ಹಲವಾರು ಸಮಸ್ಯೆಗಳೊಡನೆ ಚಂಡಮಾರುತ ಪೀಡನೆ ಪರಿಹಾರಗಳೂ ಸಮಸ್ಯೆಯಾಗುತ್ತಿವೆ.

ಚಂಡಮಾರುತವನ್ನೆದುರಿಸುವುದು, ಮುಂಜಾಗರೂಕತೆ ಕಾರ್ಯಗಳು ಮೊದಲ ಮೊದಲೆ ಜರುಗಬೇಕಾಗಿದೆ. ವಿಜ್ಞಾನದ ನೆರವು ಪಡೆದು ಮುಂದುವರಿದಲ್ಲಿ ಭೀಕರ ಹಾನಿಯನ್ನು ತಪ್ಪಿಸಬಹುದಾಗಿದೆ. ಇಲ್ಲವಾದರೆ ಪ್ರಕೃತಿ ಶಾಪವಾದೀತು, ಸಾಕ್ಷಾತ್ ಯಮುನಾದೀತು!!

---

## 'ನಗೆಯ ಚಿತ್ರ'

ಒಂದು ದಿನ ಶಿವಪಾರ್ವತಿಯರು ಕೈಲಾಸದಲ್ಲಿ ಪಗಡೆಯಾಟದಲ್ಲಿ ತಲ್ಲೀನರಾಗಿದ್ದರು. ಬೇರೆಡೆಗೆ ಹೋಗಿದ್ದ ಗಣಪತಿಯು ಅಲ್ಲಿಗೆ ಬಂದನು ಅವನಿಗೆ ಒಂದು ತಮಾಷೆ ಮಾಡಬೇಕೆನಿಸಿತು.

" ಶಿವನಿಗೆ ಕೇಳಿದ; ಅಪ್ಪ ನೀನು ನನ್ನನ್ನು ತುಂಬಾ ಪ್ರೀತಿಸುವಿಯಲ್ಲವೆ ?" ಎಂದು.

ಶಿವನು "ಹೌದು" ಎಂದನು.

ಪಾರ್ವತಿಗೂ ಹಾಗೆ ಪ್ರಶ್ನಿಸಿದ.

ಅವಳು "ಹೌದು" ಎಂದಳು.

" ಹಾಗಾದರೆ ನೀವು ನಾನು ಹೇಳಿದಂತೆ ಮಾಡಬೇಕು " ಎಂದು ಹೇಳಿದ. ಅದಕ್ಕೆ ಅವರು ಸಮ್ಮತಿಸಿದರು.

ಅಪ್ಪಾ ನಾನು ಒಂದು .......... ಎರಡು .......... ಮೂರು ಎಂದಾಗ ನೀನು ಎಡ ಕೆನ್ನೆಗೆ ಮುದ್ದಿಸು ಎಂದು ಹೇಳಿದ.

ಅಪ್ಪಾ ನಾನು ಒಂದು .......... ಎರಡು .......... ಮೂರು ಎಂದಾಗ ನೀನು ಬಲ ಕೆನ್ನೆಗೆ ಮುದ್ದಿಸಬೇಕೆಂದು ಹೇಳಿದ.

ಗಣೇಶ ಒಂದು .......... ಎರಡು .......... ಮೂರು ಎಂದ ತಕ್ಷಣ ತನ್ನ ಮುಖವನ್ನು ಹಿಂದೆ ಸರಿಸಿದ ನಂತರ .......... ?

—ಎಸ್. ಆರ್. ಶಿವಮ್ಮಾಪೂರ.



## ಯಾರು ಹಿತವರು ನಿನಗೆ ಈ ಊರ್ವರೊಳಗೆ ?

—ವಿ. ಎಸ್. ಪ್ರಕಾಶ್

ಬಾವಿಗಳು ಅಂತರ್ಜಲವನ್ನು ಪಡೆಯುವ ಸಾಧನ. ಇಂತಹ ತೋಡುಬಾವಿ ಮತ್ತು ಕೊಳವೆ ಬಾವಿಗಳಿಂದ ನೆಲದಡಿಯ ನೀರನ್ನು ಮೇಲೆತ್ತಿ ವಿವಿಧ ಉದ್ದೇಶಗಳಿಗಾಗಿ ಉಪಯೋಗಿಸಲಾಗುತ್ತದೆ. ಅದನ್ನು ಇಲ್ಲಿ ತಿಳಿಸಕೊಡಲಾಗಿದೆ. —ಸಂ

ಬಾವಿಗಳು ಅಂತರ್ಜಲವನ್ನು ಪಡೆಯುವ ಸಾಧನ. ಕರ್ನಾಟಕ ರಾಜ್ಯವು ಸುಮಾರು 1,92,204 ಚ ಕಿ ಮೀ. ವಿಸ್ತೀರ್ಣ ಹೊಂದಿದ್ದು, ಇದರಲ್ಲಿ ಸುಮಾರು 1,01,97.408 ಹೆಕ್ಟೇರ್‌ನಷ್ಟು ಪ್ರದೇಶ ಸಾಗುವಳಿಗೊಳಪಟ್ಟಿದೆ. ಎಲ್ಲಾ ವಿಧವಾದ ಮೂಲಗಳಿಂದ ನೀರಾವರಿ ಹೊಂದುತ್ತಿರುವ ಪ್ರದೇಶ ಸುಮಾರು 13,84,000 ಹೆಕ್ಟೇರ್‌ಗಳಾದರೆ, ಬಾವಿಗಳ ನೆರವಿನಿಂದ ಮಾತ್ರ ನೀರಾವರಿಯಾಗುತ್ತಿರುವ ಪ್ರದೇಶ ಸುಮಾರು 5 ಲಕ್ಷ ಹೆಕ್ಟೇರ್. ತೋಡು ಬಾವಿ ಮತ್ತು ಕೊಳವೆ ಬಾವಿಗಳಿಂದ ನೆಲದಡಿಯ ನೀರನ್ನು ಮೇಲೆತ್ತಿ, ವಿವಿಧ ರೀತಿಯಲ್ಲಿ ಉಪಯೋಗಿಸಲಾಗುತ್ತಿದೆ.

ತೋಡು ಬಾವಿ ಪುರಾತನ ಕಾಲದಿಂದಲೂ ಜನಪ್ರಿಯವಾಗಿರುವ ಸಾಧನ. ಈಗ್ಗೆ ಸುಮಾರು ಕಾಲು ಶತಮಾನದ ಹಿಂದೆ ಮನೆ ಬಳಕೆಗಾಗಿ ನೀರನ್ನು ಒದಗಿಸುವ ಸಾಧನವಾಗಿದ್ದ ಕೊಳವೆ ಬಾವಿಗಳು ಸುಮಾರು ಒಂದು ದಶಕದ ಇತ್ತೀಚೆಗೆ ಬಹಳ ಜನಪ್ರಿಯತೆಯನ್ನು ಪಡೆದು ನೀರಾವರಿಗೂ ಉಪಯೋಗಿಸಲ್ಪಡುತ್ತಿದೆ. ಇದಕ್ಕೆ ಇತ್ತೀಚೆಗೆ ನಡೆಯುತ್ತಿರುವ ವೈಜ್ಞಾನಿಕ ಅಧ್ಯಯನ ಮತ್ತು ಸಲಹೆ ಕಾರಣ. ತೋಡು ಬಾವಿಯ ಅಡ್ಡಳತೆಯು ಸುಮಾರು ೫ ಅಡಿಯಿಂದ 50 ಅಡಿಗಳವರೆಗೆ ಇದ್ದರೆ, ಕೊಳವೆ ಬಾವಿಗಳು ಸಾಮಾನ್ಯವಾಗಿ ಕೇವಲ $2\frac{1}{2}$ ಅಂಗುಲದಿಂದ ಹಿಡಿದು 10 ಅಂಗುಲದ ಅಡ್ಡಳತೆಯನ್ನು ಹೊಂದಿರುತ್ತವೆ. ತೋಡು ಬಾವಿಗಳ ಆಳ ಸಾಮಾನ್ಯವಾಗಿ 10 ಅಡಿಯಿಂದ 40 ಅಡಿಗಳಿರುತ್ತದೆ. ಕೆಲವು ತೋಡು ಬಾವಿಗಳು 50 ರಿಂದ 60 ಅಡಿ ಆಳವಾಗಿರುವುದುಂಟು. ಕೊಳವೆ ಬಾವಿಗಳನ್ನು ಸುಮಾರು 250 ಅಡಿಗಳವರೆಗೆ ಕೊರೆಯಬಹುದು. ತೋಡು ಬಾವಿ ಮತ್ತು ಕೊಳವೆ ಬಾವಿಗಳ ಆಳ ಮತ್ತು ಅಡ್ಡಳತೆಯಲ್ಲಿ ವೈಪರೀತ್ಯವನ್ನು ಹೊಂದಿದೆ. ತೋಡು ಬಾವಿಗಳು ಅನಿಶ್ಚಿತ ಜಲಸಂಚಯವನ್ನು ಹೊಂದಿದ್ದರೆ, ಕೊಳವೆ ಬಾವಿಗಳು ಪಾರ್ಶ್ವ ಅಥವಾ ಪೂರ್ಣ ಜಲಸಂಚಯವನ್ನು ಹೊಂದಿರುತ್ತವೆ.

ಬಾವಿಯನ್ನು ತೆಗೆಯಿಸಬೇಕೆಂದಿರುವಾಗ ಈ ಕೆಳಗಿನ ಪ್ರಶ್ನೆಗಳು ಎದುರಾಗುತ್ತವೆ.

1) ಯಾವ ನಿಶ್ಚಿತ ಸ್ಥಳದಲ್ಲಿ ಬಾವಿಯನ್ನು ತೆಗೆಯಿಸಬೇಕು.
2) ತೋಡು ಬಾವಿ ಅಥವಾ ಕೊಳವೆ ಬಾವಿ ಇವೆರಡರಲ್ಲಿ ಯಾವುದರಿಂದ ಅತಿ ಹೆಚ್ಚಿಗೆ ನೀರನ್ನು ಪಡೆಯಬಹುದು.
3) ಯಾವ ರೀತಿಯ ಬಾವಿಯನ್ನು ಅತಿ ಕಡಿಮೆ ಖರ್ಚಿನಿಂದ ತೆಗೆಯಿಸ ಬಹುದು.
4) ಯಾವ ರೀತಿಯ ಬಾವಿಯಿಂದ ನೀರನ್ನು ಅತಿ ಸುಲಭವಾಗಿ ಮೇಲೆತ್ತಿ ಉಪಯೋಗಿಸಬಹುದು.

### ಬಾವಿಗೆ ಸೂಕ್ತ ಸ್ಥಳ:-

ಬಾವಿ ತೋಡಲು ಸೂಕ್ತ ಸ್ಥಳವನ್ನು ಆ ಪ್ರದೇಶದ ಭೂ ಜಲ ಸಮೀಕ್ಷೆಯಿಂದ ಗೊತ್ತುಪಡಿಸಬಹುದು. ಆ ಪ್ರದೇಶದ ಸ್ಥಳವರ್ಣನೆ, ಶಿಲಾಸ್ತರಗಳ ಗುಣಗಳು ಮತ್ತು ತೆಗೆಯುವ ಬಾವಿಯ ಮೇಲೆ ಅದರ ಪರಿಣಾಮ, ಅಲ್ಲಿನ ಅಂತರ್ಜಲದ ರಾಸಾಯನಿಕ ಗುಣ

ಗಳು, ಕಾಲಮಾನಕ್ಕನುಗುಣವಾಗಿ ನೀರಿನ ಮಟ್ಟದಲ್ಲಿ ಆಗುವ ಬದಲಾವಣೆಗಳು, ಇವೆ ಮುಂತಾದವು ಪರಿಶೀಲಿಸಬೇಕಾದ ಗಮನಾರ್ಹ ವಿಷಯಗಳು. ಸಾಮಾನ್ಯವಾಗಿ ಎತ್ತರದ ಪ್ರದೇಶದಲ್ಲಿ ಅಂತರ್ಜಲದ ಮಟ್ಟವು ಹೆಚ್ಚು ಆಳಕ್ಕೂ ತಗ್ಗಿನ ಪ್ರದೇಶಗಳಲ್ಲಿ ಕಡಿಮೆ ಆಳಕ್ಕೂ ಇರುತ್ತದೆ.

**ಜಲವಿಸರ್ಜನಾ ಶಕ್ತಿ:-**

ಮಳೆಗಾಲಗಳಲ್ಲಿ ತೋಡು ಬಾವಿಗಳು ನೀರಿನಿಂದ ತುಂಬಿರುವುದು ಸರ್ವೇ ಸಾಮಾನ್ಯ ದೃಶ್ಯ. ಬೇಸಿಗೆ ಅಥವಾ ಅನಾವೃಷ್ಟಿಯ ಕಾಲಗಳಲ್ಲಿ ಕಾಣುವ ದೃಶ್ಯ ಅದಕ್ಕೆ ತದ್ವಿರುದ್ಧವಾದುದು; ಇದಕ್ಕೆ ಕಾಲಮಾನಕ್ಕನುಗುಣವಾಗಿ ಅಂತರ್ಜಲ ಮಟ್ಟದಲ್ಲಾಗುವ ಏರಿಳಿತಗಳು ಕಾರಣ. ಅಂತರ್ಜಲದ ಮಟ್ಟ ಬಾವಿಯ ತಳದಿಂದ ಕೆಳಕ್ಕಿಳಿದಾಗ ಬಾವಿ ಒಣಗುವುದು. ಅಂತರ್ಜಲ ಮಟ್ಟದಲ್ಲಿ ಉಂಟಾಗುವ ಏರಿಳಿತದ ವ್ಯತ್ಯಾಸಗಳು ಸಾಮಾನ್ಯವಾಗಿ ಎತ್ತರದ ಪ್ರದೇಶದಲ್ಲಿ 10 ಅಡಿಯಿಂದ 50 ಅಡಿಗಳವರೆವಿಗೆ ಹಾಗೂ ತಗ್ಗು ಪ್ರದೇಶಗಳಲ್ಲಿ 5 ಅಡಿಯಿಂದ 20 ಅಡಿಗಳವರೆವಿಗೆ ಇರುತ್ತದೆ. ತೋಡು ಬಾವಿಗಳು ಇದರಿಂದ ಬಹಳಷ್ಟು ಪ್ರಭಾವಿತಗೊಳ್ಳುತ್ತದೆ. ಕೊಳವೆ ಬಾವಿಗಳಲ್ಲಿ ಅಂತರ್ಜಲದ ಏರಿಳಿತ ಪ್ರಭಾವ ಬಹಳ ಕಡಿಮೆ. ತೋಡು ಬಾವಿಗಳಲ್ಲಿ ಕಾಲಮಾನಕ್ಕನುಗುಣವಾಗಿ ನೀರು ಸರಬರಾಜಿನಲ್ಲಿ ಏರಿಳಿತವಾದರೆ, ಕೊಳವೆ ಬಾವಿಗಳಲ್ಲಿ ಎಲ್ಲಾ ಕಾಲಗಳಲ್ಲೂ ಕೂಡ ಸ್ಥಿಮಿತ ಮಟ್ಟದ ನೀರು ಸರಬರಾಜು ದೊರೆಯುತ್ತದೆ. ಸಾಮಾನ್ಯವಾಗಿ ತೋಡು ಬಾವಿಗಳಲ್ಲಿರುವ ನೀರು ಕೆಲವೇ ಗಂಟೆಗಳಲ್ಲಿ ಖಾಲಿಯಾಗಬಲ್ಲವಾಗಿದ್ದು ಪುನಃ ಅಷ್ಟು ನೀರನ್ನು ಪಡೆಯಲು ಒಂದು ದಿನಕ್ಕೂ ಹೆಚ್ಚು ಸಮಯವನ್ನು ತೆಗೆದುಕೊಳ್ಳುತ್ತದೆ. ಕೊಳವೆ ಬಾವಿಗಳು ಇದಕ್ಕೆ ತದ್ವಿರುದ್ಧವಾಗಿ ನೀರಿನ ಸರಬರಾಜನ್ನು ನಿರಂತರವಾಗಿ ನೀಡಬಲ್ಲವಾಗಿದೆ. ಕೊಳವೆ ಬಾವಿಗಳು ತೋಡು ಬಾವಿಗಳಿಗಿಂತ ಹೆಚ್ಚಿನ ಜಲವಿಸರ್ಜನಾ ಶಕ್ತಿಯನ್ನು ಹೊಂದಿರುತ್ತದೆ.

**ಬಾವಿ ತೋಡಲು ತಗಲುವ ಖರ್ಚು**

ತೋಡುಬಾವಿ ಮತ್ತು ಕೊಳವೆ ಬಾವಿಗೆ ತಗಲಬಹುದಾದ ಖರ್ಚು ( ಅಂದಾಜು ) ಕೆಳಗೆಕೊಟ್ಟಿದೆ.

ಸುಮಾರು 35 ಅಡಿ ಅಡ್ಡಳತೆ ಹಾಗೂ 35 ಅಡಿ ಆಳದ, ಕಲ್ಲಿನ ಕಟ್ಟಡದಿಂದೊಡಗೂಡಿದ ತೋಡು ಬಾವಿಗೆ ತಗಲುವ ಖರ್ಚು ಸುಮಾರು 20 ರಿಂದ 25 ಸಾವಿರ ರೂಪಾಯಿಗಳು. ಬಾವಿಗೆ ಬೇಕಾಗಿರುವ ಕಟ್ಟಡದ ಕಲ್ಲು ಹತ್ತಿರದಲ್ಲಿ ಸಿಕ್ಕುವಹಾಗಿದ್ದರೆ ಖರ್ಚು ಸುಮಾರು ಎರಡರಿಂದ ಮೂರು ಸಾವಿರ ರೂಪಾಯಿಯವರೆವಿಗೆ ಕಡಿಮೆಯಾಗುತ್ತದೆ. ಬಾವಿಯಿಂದ ನೀರೆತ್ತಲು ಬೇಕಾಗುವ ಸಂಟ್ರಿಫ್ಯೂಗಲ್ ಪಂಪ್‌ಗೆ ಸುಮಾರು 4000 ರೂಗಳು ಖರ್ಚಾಗುತ್ತದೆ. ಜೊತೆಗೆ ನೀರನ್ನು ಸೂಕ್ತ ಜಾಗಗಳಿಗೆ ಒಯ್ಯಲು ಬೇಕಾಗುವ ಕೊಳವೆಗಳಿಗೆ ಖರ್ಚು ತಗುಲುತ್ತದೆ.

ಸುಮಾರು 150 ಅಡಿ ಆಳ, 6 ಇಂಚು ಅಡ್ಡಗಲ ಮತ್ತು 40 ಅಡಿ ಕೇಸಿಂಗ್ ಪೈಪ್ ಇರುವ ಕೊಳವೆ ಬಾವಿಗೆ ತಗಲುವ ಖರ್ಚು (1) ಕಡಿಮೆ ವೇಗದ ಕೊರೆಯುವ ಯಂತ್ರದಿಂದ ( ಸ್ಲೋರಿಗ್ ) ಮಾಡಿಸಿದರೆ 5000-00 ರೂಗಳು (2) ವೇಗದ ಕೊರೆಯುವ ಯಂತ್ರದಿಂದ ( ಫಾಸ್ಟ್‌ರಿಗ್ ) ಮಾಡಿಸಿದರೆ ಸುಮಾರು 9000-00 ರೂಗಳು ಆಗುತ್ತದೆ. ಕೊಳವೆ ಬಾವಿಗಳಿಂದ ನೀರೆತ್ತಲು ಟರ್ಬೈನ್ ಪಂಪ್ ಅಥವಾ ಸಬ್‌ಮರ್ಸಿಬಲ್ ಪಂಪ್‌ಗಳ ಬಳಕೆ ಅತಿ ಸೂಕ್ತ. ಸಬ್‌ಮರ್ಸಿಬಲ್ ಪಂಪ್‌ಗಳ ಬೆಲೆ ಅವುಗಳ ಅಶ್ವಶಕ್ತಿಗಳ ಮೇಲೆ ಅವಲಂಬಿಸಿರುತ್ತದೆ. ಸಾಮಾನ್ಯವಾಗಿ ಅವುಗಳ ಬೆಲೆ ಸುಮಾರು 10,000-00 ರೂಗಳಾಗುತ್ತದೆ.

ಈಗಾಗಲೆ ತೋಡುಬಾವಿಗಳಿದ್ದು ಅವುಗಳಲ್ಲಿ ಸಾಕಷ್ಟು ನೀರಿಲ್ಲದಿದ್ದರೆ, ಬಾವಿಯ ತಳದಲ್ಲಿ ಕೊಳವೆ ಬಾವಿಗಳನ್ನು ಹಾಕಿಸಿ ಹೆಚ್ಚಿಗೆ ನೀರನ್ನು ಪಡೆಯಬಹುದು. ಬಾವಿಯ ತಳದಲ್ಲಿ ಹಾಕಿದ ರಂಧ್ರಗಳಿಂದ ನೀರು ಹೊರಕ್ಕೆ ನಿರಂತರ ಚಿಮ್ಮಿ ಖಾಲಿಮಾಡಿದ ಬಾವಿಯಲ್ಲಿ ಬೇಗ ಮೊದಲಿನ ಹಾಗೆ ನೀರು ಶೇಖರಗೊಳ್ಳಲು ಅನುವಾಗುವುದು. ಕೆಲ ಸಂದರ್ಭಗಳಲ್ಲಿ ಪಂಪ್‌ನ್ನು (ಸೆಂಟ್ರಿಫ್ಯೂಗಲ್ ) ತೋಡುಬಾವಿಯೊಳಗೆ ಇಳಿಸಿ ನೇರವಾಗಿ ನೀರನ್ನು ಮೇಲೆತ್ತಬಹುದು.

ತೋಡು ಬಾವಿಯಲ್ಲಿ ಸಾಕಷ್ಟು ನೀರನ್ನು ಸಂಗ್ರಹಿಸಿಡಬಹುದು. ತೋಡು ಬಾವಿಗೆ ಹೆಚ್ಚಿನ ಸ್ಥಳಾವ

(25 ನೇ ಪುಟ ನೋಡಿ)



# ಅನುಭಾವಿ ಅಲ್ಲಮ

—ನಿತ್ಯಾನಂದ ಮೂರ್ತಿ

ಕನ್ನಡ ಸಾಹಿತ್ಯ ಚರಿತ್ರೆಯಲ್ಲೇ ಹನ್ನೆರಡನೆಯ ಶತಮಾನ ಒಂದು ಮೈಲಿಗಲ್ಲು. ಈ ಕಾಲದಲ್ಲಿ ಕನ್ನಡದಲ್ಲಿ ಧಾರ್ಮಿಕ ಹಾಗೂ ಸಾಹಿತ್ಯ ಕ್ಷೇತ್ರಗಳಲ್ಲಿ ಅದ್ಭುತ ಕ್ರಾಂತಿಕಾರಕ ಬದಲಾವಣೆಗಳಾದವು. ಈ ಕ್ರಾಂತಿಯ ಕಾರಣಪುರುಷರು ಶಿವಶರಣರು ಶರಣರಲ್ಲಿ ಅಗ್ರಗಣ್ಯನಾದವನು ಅಲ್ಲಮಪ್ರಭು. ಆ ಕಾಲದ ಶರಣ ಸಾಮ್ರಾಜ್ಯಕ್ಕೆ 'ಪ್ರಭುದೇವರು' ಸಾಮ್ರಾಟರಾಗಿ ಮೆರೆದರು. ಅವರ ಘನ ವ್ಯಕ್ತಿತ್ವವನ್ನು ಪರಿಚಯಿಸುವ ಯತ್ನವನ್ನು ನಡೆಸಲಾಗಿದೆ.

ಅಲ್ಲಮರ ಜೀವನ ಚರಿತ್ರೆ ಬೇರೆ ಬೇರೆ ಕತೆಗಳ ಮಂಜಿನಿಂದ ಆವೃತವಾಗಿರುವುದೇನೋ ನಿಜ. ಆದರೆ ಕನ್ನಡನಾಡಿನ ಬಳ್ಳಿಗಾವಿಯಲ್ಲಿ ಅವತರಿಸಿ ಪರಮವಿರಕ್ತರಾಗಿ ಜ್ಞಾನದುತ್ತುಂಗ ಶಿಖರವನ್ನು ಮುಟ್ಟಿ ಶಿವಾದ್ವೈತದ ಮೂರ್ತಿಯಾಗಿ ಶರಣ ಮಾರ್ಗಕ್ಕೆ ಗುರುವಾದುದು ಮುಖ್ಯ ಅಂಶ. ಅಂದಿನ ಸಾಧಕರ ಸಿದ್ಧರ ಎಲ್ಲರ ಮೇಲೆ ತಮ್ಮ ಗಾಢವಾದ ಪ್ರಭಾವ ಬೀರಿದರು. ಅವರ ದರ್ಶನವನ್ನು ಪಡೆದವರೆಲ್ಲರೂ ಪಾವನರಾದರು, ಬದ್ಧರು ಸಾಧಕರಾದರು, ಸಾಧಕರು ಸಿದ್ಧರಾದರು. ಪೂರ್ಣತೆಯನ್ನು ಪಡೆದು ಧನ್ಯರಾದರು. ಬಸವಾದಿ ಪ್ರಮಥರಿಗೆ ಬೆಂಬಲವಾಗಿನಿಂತು ಜ್ಞಾನಬೋಧೆಯನ್ನು ಮಾಡಿದ ಮಹಾತ್ಮರೆನಿಸಿಕೊಂಡರು. ಸಾಕ್ಷಾತ್ ಶಿವರೂಪಿಯೆಂದು 'ಅಲ್ಲಮರನ್ನು' 'ಶರಣರು' ತಮ್ಮ ಜೀವಿತ ಕಾಲದಲ್ಲಿಯೇ ತಿಳಿದಿದ್ದರು. ಅಲ್ಲಮರ ಹಿರಿತನಕ್ಕೆ ಇದು ಸಾಕ್ಷಿಯಲ್ಲವೆ.

ಮಹಾಜ್ಞಾನಿಗಳಾದ ತೀಕ್ಷ್ಣ ಹಾಗೂ ನಿರ್ದಾಕ್ಷಿಣ್ಯಕ್ಕೆ ಮತ್ತೊಂದು ಹೆಸರಾಗಿದ್ದರು. ಯಾವುದನ್ನು ಯಾರನ್ನೂ ಪರೀಕ್ಷಿಸದೆ ಒಪ್ಪಿಕೊಳ್ಳುತ್ತಿರಲಿಲ್ಲ. ಪ್ರಭುದೇವರ ವಾಣಿ ದೇವರ ವಾಣಿಯಂತೆ ಪ್ರಾಮಾಣಿಕವಾದುದು. ಮತಪಂಥಗಳ ಯಾವ ಕಟ್ಟಿಗೂ ಒಳಪಡದೆ ಎಲ್ಲ ಮಾರ್ಗಗಳ ವ್ಯಕ್ತಿಗಳ ಗುಣವನ್ನು ಕೊಂಡಾಡಿದರು. ತಾನು ಕಂಡ ಲೋಪದೋಷಗಳನ್ನು ಅದು ತನ್ನ ಪಂಥದವರಾಗಲೀ ಟೀಕೆಗೆ ಒಳಪಡಿಸಿ ತಿದ್ದುತ್ತಿದ್ದರು. ಅಲ್ಲಮರು ಎಲ್ಲಿಯೂ ಒಂದೆಡೆ ನಿಲ್ಲದೆ ಕರ್ನಾಟಕದಾದ್ಯಂತ ಸಂಚರಿಸಿ ಸಾಧಕರನ್ನು ಸಂಧಿಸಿ ಪರಿಪೂರ್ಣದೆಡೆಗೆ ದಾರಿದೋರುತ್ತಾ ದೇಶಸಂಚಾರ ಮಾಡುತ್ತಾ ಸಿದ್ಧರಾಮರೊಡಗೊಂಡು ಕಲ್ಯಾಣಕ್ಕೆ ಬಂದರು. ಕಲ್ಯಾಣದಲ್ಲಿ ಬಸವಣ್ಣ, ಚನ್ನಬಸವಣ್ಣ, ಅಕ್ಕಮಹಾದೇವಿಯರೇ ಮೊದಲಾದಂತಹ ಶರಣ, ಶರಣೆಯರಿಗೆ ಗುರುವಾದರು. ವಿಚಾರ ಮಥನದ ಕೇಂದ್ರವಾದ ವೀರಶೈವ ಅನುಭಾವಿ ನಿರ್ಮಿತ ಅನುಭವ ಮಂಟಪದಲ್ಲಿ ಚರ್ಚೆಗೆ ಬರುತ್ತಿದ್ದ ವಿಷಯಗಳು ನೂರಾರು. ಒಬ್ಬೊಬ್ಬರಿಗೂ ತಮ್ಮ ತಮ್ಮ ಸಂದೇಹಗಳನ್ನು, ಸಮಸ್ಯೆಗಳನ್ನು, ಅಭಿಪ್ರಾಯಗಳನ್ನು ಸಭೆಯ ಮುಂದಿಡಲು ಚರ್ಚಿಸಲು ಅವಕಾಶವಿತ್ತು. ಶೂನ್ಯಸಿಂಹಾಸನಾಧೀಶ್ವರ ಅಲ್ಲಮರೇ ಒಂದು ಸಮಸ್ಯೆಯನ್ನೋ ಅಥವಾ ತಮ್ಮ ಅನುಭವದಿಂದ ಮೂಡಿದ ಒಗಟನ್ನೋ ಶರಣರ ಮುಂದಿಟ್ಟು ಅವರ ವಿಚಾರ ಶಕ್ತಿಯನ್ನು ಪ್ರಚೋದಿಸಿ ಅದಕ್ಕೆ ಸೂಕ್ತ ಉತ್ತರ ಶರಣರಿಂದ ದೊರಕದಿದ್ದಲ್ಲಿ ತಾವೇ ಅದರ ಅರ್ಥವನ್ನು ತಿಳಿಸಿ ಸಮಸ್ಯೆ ಬಗೆಹರಿಸುತ್ತಿದ್ದರು. ಒಮ್ಮೊಮ್ಮೆ ಒಗಟಿನ ವೇಷದಲ್ಲಿ ಮೈವೆತ್ತಿಬಂದ ಅನುಭವವಾಣಿಯ ಗಾಂಭೀರ್ಯದಿಂದ ಅನುಭವ ಮಂಟಪ ಸ್ತಬ್ಧವಾಗುತ್ತಿತ್ತು. ಶರಣರು ಮಂತ್ರಮುಗ್ಧರಾಗುತ್ತಿದ್ದರು. ಅಂತಹ ಜ್ಞಾನದ ಗಣಿ ಅಲ್ಲಮಪ್ರಭು.

ಹೀಗೆ ಆ ಕಾಲದ ಸಾಧಕರಿಗೆ ಬೆಳಕನ್ನು ತೋರಿಸಿ ಹುಟ್ಟಿ ಬಂದುದಕ್ಕೆ ತಾನು ಮಾಡಬಹುದಾದ

ಕಾರ್ಯವನ್ನೆಲ್ಲಾ ಮಾಡಿ ದೇಹ ಬಂಧನವನ್ನು ದಾಟಿ ಶಾಶ್ವತವಾದ ಬೆಳಕಿನಲ್ಲಿ ಬಯಲಾಗಲು ಶ್ರೀ ಶೈಲದ ಕಡೆಗೆ ನಡೆದು ಶ್ರೀ ಗಿರಿಯಲ್ಲಿ ಲೀನರಾದರು.

**ಅಲ್ಲಮರ ವಚನಗಳು :**

ಸುಲಭ ಗ್ರಾಹ್ಯವಲ್ಲದ ಅವರ ವಚನಗಳಲ್ಲಿ ಅನುಭಾವ ಮತ್ತು ಜ್ಞಾನರಸ, ನೊರೆಗಟ್ಟಿ ಹರಿದಿವೆ. ಗುಹೇಶ್ವರ ಎಂಬ ಅಂಕಿತವುಳ್ಳ ವಚನಗಳ ಬಹುಭಾಗವು ಎಂತಹವರಿಗೂ ಅರ್ಥವಾಗುವುದು ಸಾಧ್ಯವಿಲ್ಲ. ಅನುಭಾವದ ಆಳದಿಂದ ಜ್ಞಾನದ ಶಿಖರದಿಂದ ಉಸುರಿದ ಆ ಮಾತು ಆಡಿದ ಮಾತಲ್ಲ. ಅಲ್ಲಮನ ಅಮರವಾಣಿಯಾದ "ಮಾತೆಂಬುದು ಜ್ಯೋತಿರ್ಲಿಂಗ" ಎಂಬ ಹಾಗೆಯೇ ಅವರ ವಚನಗಳಿಗೆ ಸರಿಯಾಗಿ ಹೊಂದುತ್ತದೆ. ಮಾತಿಗೆ ನಿಲುಕದ ಮತ್ತು ಮಾತಿನಲ್ಲಿ ಹೇಳಲು ಅಸಾಧ್ಯವಾದ ಅನುಭವವನ್ನು ಅವರು ಪಡೆದರು.

"ನಿಮ್ಮ ನಿಲುವ ಅನುಭವ ಸುಖಿ ಬಲ್ಲ
ಅರಿಯಬಾರ ದಘನವನರಿದು ಅರಿಯದಂತಿರ್ಪರು ಗುಹೇಶ್ವರಾ"

ಹೀಗೆ ಪ್ರಭುಗಳು ಅನುಭವದ ಅನಿರ್ವಚನೀಯತೆಯನ್ನು ಹೇಳಿಕೊಂಡಿದ್ದಾರೆ. ಪ್ರಭುದೇವರ ವಚನಗಳ ಬಹುಭಾಗ ಸಾಮಾನ್ಯರಿಗೇಕೆ, ವಿದ್ವಾಂಸರಿಗೂ ಅರ್ಥವಾಗದ ಬೆಡಗಿನ ವಚನ. ಉದಾಹರಣೆಗೆ ಈ ಕೆಳಗಿನ ವಚನಗಳನ್ನು ನೋಡಬಹುದು.

" ತಲೆಯಿಲ್ಲದ ತಲೆಯಾತಂಗೆ ಕರುಳಿಲ್ಲದ ಒಡಲುನೋಡಾ
ಅನಲಂಗೆ ಅಂಗವಿಲ್ಲದಂಗನೆ ಸತಿಯಾಗಿಪ್ಪಳು
ಇವರಿಬ್ಬರ ಬಸಿರಲ್ಲಿ ಹುಟ್ಟಿದಳೆಮ್ಮ ತಾಯಿ
ನಾ ಹುಟ್ಟಿ ತಾಯ ಕೈವಿಡಿದು ಸಂಗವ ಮಾಡಿ
ನಿರ್ದೋಷಿಯಾದೆನು ಕಾಣಾ ಗುಹೇಶ್ವರಾ "

" ಭಿತ್ತಿ ಮೂವರ ಮೇಲೆ ಚಿತ್ರವ ಬರೆಯಿತು,
ಪ್ರಥಮ ಭಿತ್ತಿಯ ಚಿತ್ರ ಚಿತ್ರದಂತಿದ್ದಿತು,
ಎರಡನೆಯ ಭಿತ್ತಿಯ ಚಿತ್ರ ಹೋಗುತ ಬರುತ ಇದ್ದಿತು,
ಮೂರನೇ ಭಿತ್ತಿಯ ಚಿತ್ರ ಹೋಯಿತ್ತು ಮರಳಿಬಾರದು
ಗುಹೇಶ್ವರಾ ನಿಮ್ಮ ಶರಣ ತ್ರಿವಿಧದಿಂದತ್ತಲೆ. "

ಈ ವಚನಗಳಲ್ಲಿ ಸಾಹಿತ್ಯ ಸೌಂಧರ್ಯವಿಲ್ಲದೆ ಇದ್ದರೂ ಅನುಭಾವ ನೊರೆಗಟ್ಟಿದೆ. ಇವುಗಳಿಗೆ ವಿವರಣೆಯಿಲ್ಲದೆ ಅರ್ಥ ತಿಳಿಯುವುದು ಕಷ್ಟ. ಇಲ್ಲಿ ಸೂಕ್ಷ್ಮ ವಿಚಾರಗಳಿಗೆ ಪ್ರತೀಕಗಳ ಚಿತ್ರ ತೋರಿಸಿರುವುದುಂಟು. ಇಂತಹ ಬೆಡಗಿನ ವಚನಗಳನ್ನು ಬಿಟ್ಟರೆ ಉಳಿದವುಗಳಲ್ಲಿ ಸಾಹಿತ್ಯ ಸೌಂದರ್ಯ ಸವಿಯನ್ನು ರಮಣೀಯತೆಯನ್ನು ಆಸ್ವಾದಿಸಿ ಆನಂದಿಸಬಹುದಾಗಿದೆ.

" ಬೆಟ್ಟಕ್ಕೆ ಚಳಿಯಾದಡೆ ಏನಹೊದ್ದಿಸುವರಯ್ಯ
ಬಯಲು ಬತ್ತಲೆಯಿರ್ದರೆ ಏನನುಡಿಸುವರಯ್ಯ
ಭಕ್ತನು ಭವಿಯಾದೊಡೆ ಅದೇನನುಪಮಿಸುವನಯ್ಯ
ಗುಹೇಶ್ವರಾ "

" ಬೆಟ್ಟದ ನೆಲ್ಲಿಕಾಯಿ ಸಮುದ್ರದೊಳಗಣ ಉಪ್ಪು
ಎತ್ತಣಿಂದ ಎತ್ತಣ ಸಂಬಂಧವಯ್ಯ
ಎತ್ತಣ ಮಾವಿನ; ಎತ್ತಣ ಕೋಗಿಲೆ ಎತ್ತಣಿಂದೆತ್ತಣ
ಸಂಬಂಧವಯ್ಯ ?
ಗುಹೇಶ್ವರಾ, ಲಿಂಕೆಕ್ಕೆಯು ಎನಗೆಯು ಎತ್ತದಿಂದೆತ್ತ
ಸಂಬಂಧವಯ್ಯ. "

ಈ ವಚನಗಳಲ್ಲಿ ನಾವು ಸಾಹಿತ್ಯದ ಲಕ್ಷಣವನ್ನು ನೋಡ ಬಹುದು. ಅಲ್ಲಮನ ವೇದವೆಂಬುದು ಓದಿನ ಮಾತು " ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಿರಿ " ಮುಂತಾದ ನುಡಿಗಳು ಸೂತ್ರದಂತಿವೆ. ಅಲ್ಲಮ ಪ್ರಭು ವಿಗ್ರಹಾರಾಧನಾ ವಿರೋಧಿ ಅಂತರಂಗದಲ್ಲಿ ಶಿವನನ್ನು ಪ್ರತಿಷ್ಠಾಪಿಸಿ ಕೊಳ್ಳಬೇಕೆಂಬುದೇ ಅವರ ಮತ, " ದೇಹದಲ್ಲಿಯೇ ದೇವಾಲಯವಿರುವಾಗ ಮತ್ತೆ ದೇವಾಲಯವೇಕೆ ? ಎಂದು ಪ್ರಶ್ನಿಸಿದ್ದಾನೆ.

" ಹೊನ್ನು ಮಾಯೆ ಎಂಬರು ಹೊನ್ನು ಮಾಯೆಯಲ್ಲ
ಹೆಣ್ಣು ಮಾಯೆ ಎಂಬರು ಹೆಣ್ಣು ಮಾಯೆಯಲ್ಲ
ಮಣ್ಣು ಮಾಯೆ ಎಂಬುರು ಮಣ್ಣು ಮಾಯೆಯಲ್ಲ
ಮನದ ಮುಂದಣ ಆಶೆಯೇ ಮಾಯೇಕಾಣಾ ಗುಹೇಶ್ವರಾ"

ಈ ವಚನದಲ್ಲಿ ಮಾನವನು ಆಸೆಯನು ಬಿಡಬೇಕೆಂಬ ತತ್ವವನ್ನು ಮಾರ್ಮಿಕವಾಗಿ ಹೇಳಿದ್ದಾರೆ. ತೀರ್ಥಯಾತ್ರೆಯನ್ನು ಮಾಡುವುದರಿಂದ ಯಾರೂ ಮುಕ್ತಿಯನ್ನು ಹೊಂದುವುದಿಲ್ಲ, ವ್ರತ ನಿಯಮ ದೇಹದಂಡನೆಗಳಿಂದಲೂ ಯಾವ ಲಾಭವೂ ಇಲ್ಲ. ಚಂಚಲ ಪೂರ್ವ ಮನಸ್ಸನ್ನು ಏಕಾಗ್ರತೆಗೆ ತಂದು ಕೊಂಡು ಅದನ್ನು ಪರಮಾತ್ಮನಲ್ಲಿ ನೆಲೆಗೊಡಿಸಿದಾಗ ಮಾತ್ರ ಮುಕ್ತಿ ಸಾಧ್ಯ ಎಂಬುದನ್ನು ಈ ಕೆಳಗಿನ ವಚನದಲ್ಲಿ ಹೇಳಿದ್ದಾರೆ.



" ಸುತ್ತಿ ಸುತ್ತಿ ಬಂದಡಿಲ್ಲ
ಲಕ್ಷ ಗಂಗೆ ಮಿಂದಡಿಲ್ಲ
ಅಂದಂದಿಗೆ ಅತ್ತಲಿತ್ತ ಹರಿವ ಮನವ ಚಿತ್ತದಲ್ಲಿ
ನಿಲ್ಲಿಸಬಲ್ಲಡೆ ಬಚ್ಚಬರಿಯ ಬೆಳಗು ಲಿಂಗವು "

ಸುಖದ ನೆರಳನ್ನು ಬೆಂಬತ್ತಿ ಗುಣ ಹಣ ಕಳೆದುಕೊಂಡವರುಂಟು. ಶಿವನಿಗಾಗಿ ನಡುಕಟ್ಟನಿಂತವರು ಲೋಕದಲ್ಲಿ ವಿರಳವೆಂಬುದನ್ನು ಸೊಗಸಾಗಿ ಈ ಕೆಳಗಿನ ವಚನದಲ್ಲಿ ಹೇಳಿದ್ದಾರೆ.

" ಆಸೆಗೆ ಸತ್ತುದು ಕೋಟಿ
ಆಮಿಷಕ್ಕೆ ಸತ್ತುದು ಕೋಟಿ
ಹೊನ್ನು ಮಣ್ಣಿಂಗೆ ಸತ್ತುದು ಕೋಟಿ
ಗುಹೇಶ್ವರಾ ನಿನಗಾಗಿ ಸತ್ತವರನಾರನೂ ಕಾಣೆ "

ಅಲ್ಲಮರ ವಚನಗಳಲ್ಲಿ ಬಾಳಿಗೆ ಬೇಕಾಗುವಷ್ಟು ಎಲ್ಲಾ ತತ್ವಗಳೂ ಅಡಗಿವೆ. ಅವರ ವಚನಗಳಲ್ಲಿ ಜಾತಿ ಕುಲ ಗೋತ್ರಗಳಿಗೆ ಅತೀತವಾದ ಕಾಲ ದೇಶಗಳ ಎಲ್ಲೆಯನ್ನು ದಾಟಿದ ನಿತ್ಯ ಸತ್ಯಗಳು ಪ್ರತಿಪಾದಿಸಲ್ಪಟ್ಟಿವೆ.

ಹರಿಹರ, ವಿರೂಪಾಕ್ಷ ಪಂಡಿತ, ಭೀಮಕವಿ, ಸೋಮರಾಜ, ಮಗ್ಗೆಯ ಮಾಯಿದೇವ, ಷಡಕ್ಷರ ಕವಿ ಚಾಮರಸ ಮುಂತಾದ ಪ್ರಸಿದ್ಧ ಕವಿಗಳು ತಮ್ಮ ಪ್ರಭುದೇವರ ರಗಳೆ, ಪ್ರಭುದೇವರ ಪುರಾಣ ಪ್ರಭು ನಟನ ತಾರಾವಳಿ, ಪ್ರಭುಚರಿತ್ರ, ಪ್ರಭುಗೀತೆ, ಪ್ರಭು ಲಿಂಗಲೀಲೆ ಮುಂತಾದ ಕಾವ್ಯ ಕೃತಿಗಳಲ್ಲಿ ಪ್ರಭುದೇವರ ಪವಾಡ ಪೂರಿತ ಜೀವನ ಚಿತ್ರಣವನ್ನು ಸುಂದರವಾಗಿ ಚಿತ್ರಿಸಿದ್ದಾರೆ.

ಹನ್ನೆರಡನೆಯ ಶತಮಾನದಲ್ಲಿ ಬಾಳಿಬೆಳಗಿದ ವೈರಾಗ್ಯ ಮೂರ್ತಿ ಅಲ್ಲಮಪ್ರಭು ಅವರೊಬ್ಬ ಕಾರಣಿಕ ಪುರುಷರು. " ತಾನು ಏರಿದುದಲ್ಲದೆ ಇಡೀ ಮಾನವ ಸಮಾಜವನ್ನೇ ಪರಿಪೂರ್ಣದೆಡೆಗೆ ಕೊಂಡೊಯ್ಯಲು ಹವಣಿಸಿದ ಚಿರಂತನ ಸಾಹಸ ಶಕ್ತಿ ಎಂದೆಂದೂ ನಂದದ ಜಗಜ್ಜ್ಯೋತಿ "

---

(22 ನೇ ಪುಟದಿಂದ)

ಕಾಶ ಬೇಕಾಗುತ್ತದೆ. ಬಾವಿಯನ್ನು ತೆಗೆಯಲು ಬಹಳ ಶ್ರಮ ಮತ್ತು ಕಾಲ ಬೇಕಾಗುತ್ತದೆ. ಕೆಲವು ಪ್ರದೇಶಗಳಲ್ಲಿ ದಡ ಕುಸಿಯುವುದು ಸಾಮಾನ್ಯ. ಬಾವಿಯಿಂದ ತೆಗೆದ ಮಣ್ಣನ್ನು ಹೊರಕ್ಕೆ ಸಾಗಿಸಬೇಕಾಗುತ್ತದೆ. ತೋಡುಬಾವಿಯನ್ನು ಬೇಸಿಗೆಕಾಲದಲ್ಲಿ ಮಾತ್ರ ತೋಡಬಹುದಾದ್ದರಿಂದ, ಒಂದು ಬೇಸಿಗೆಯಲ್ಲಿ ಮುಗಿಯದೆ ಮುಂದಿನ ಬೇಸಿಗೆಗಾಗಿ ಕಾಯಬೇಕಾಗಬಹುದು. ಹೆಚ್ಚಿನ ಆಳದ ಬಾವಿಯಿಂದ ನೀರನ್ನು ಎತ್ತಿ ಉಪಯೋಗಿಸುವುದು ಬಹಳ ಅತಿ ಖರ್ಚಿನದಾಗುತ್ತದೆ. ಒಳ್ಳೆಯ ಗುಣಧರ್ಮದ ನೀರು ದೊರೆಯುವಬಗ್ಗೆ ಅನಿಶ್ಚಿತತೆ ಮತ್ತು ಬಾವಿಗೆ ಗೋಡೆಯನ್ನು ಕಟ್ಟದಿದ್ದರೆ, ನೀರು ಮಲಿನವಾಗುವ ಸಂಭವವಿದೆ.

ಕೊಳವೆ ಬಾವಿಗೆ ಬೇಕಾಗುವ ಸ್ಥಳ ಅತಿ ಕಡಿಮೆ ಕೊಳವೆ ಬಾವಿಯನ್ನು ಅತಿ ಕಡಿಮೆ ಸಮಯದಲ್ಲಿ ( ಒಂದೆರಡು ದಿನಗಳಲ್ಲಿ ) ತೆಗೆಯಬಹುದು. ಅತಿ ಆಳದಲ್ಲಿ ದೊರೆತರೂ ಕೂಡ ಅದು ಅನುಕೂಲಕರ. ಬಾವಿಯನ್ನು ಕೊರೆಯುವಾಗ ನೀರಿನ ಬುಗ್ಗೆ ದೊರೆತರೆ ಅತಿ ಹೆಚ್ಚಿನ ನೀರು, ಅತಿ ಕಡಿಮೆ ಖರ್ಚಿನಲ್ಲಿ ದೊರೆಯುತ್ತದೆ. ಕೊಳವೆ ಬಾವಿಗಳಲ್ಲಿ ಸಾಮಾನ್ಯವಾಗಿ ಉತ್ತಮ ಗುಣದ ನೀರು ದೊರೆಯುತ್ತದೆ. ಇತ್ತೀಚೆಗೆ ಕೊಳವೆ ಬಾವಿಗಳು ಹೆಚ್ಚಿಗೆ ಪ್ರಚಲಿತದಲ್ಲಿದ್ದು, ಅದರ ಪಂಪ್ ಸಲಕರಣೆಗಳ ರಿಪೇರಿ, ಮತ್ತು ದುರಸ್ತಿಗಳನ್ನು ಜಿಲ್ಲಾ ಕೇಂದ್ರಗಳಲ್ಲಿ ಮಾಡಿಸಬಹುದು. ಯಾವುದೇ ಜಮೀನನ್ನು ಭೂ ವೈಜ್ಞಾನಿಕ ಸಮೀಕ್ಷಣೆಗಳಿಗೊಳಪಡಿಸಿ, ಸೂಕ್ತ ಸ್ಥಳದಲ್ಲಿ ಕೊಳವೆ ಬಾವಿಗಳನ್ನು ನಿರ್ಮಿಸಿದರೆ ತೋಡು ಬಾವಿಗಳಿಗಿಂತ ಅನುಕೂಲಕರವಾಗಿರುವುದು.

ಇಷ್ಟೆಲ್ಲಾ ವಿವರಗಳನ್ನು ಅವಲೋಕಿಸಿ ಹಾಗೂ ಭೂ ವಿಜ್ಞಾನಿಗಳ ಸಲಹೆ ಪಡೆದು ರೈತ ಮಿತ್ರರು ತನಗೆ ಯಾವರೀತಿಯ ಬಾವಿ ಬೇಕೆಂಬುದನ್ನು ನಿರ್ಧರಿಸಬಹುದು.

## ಮಹಾತ್ಮರ ನೆನಪುಗಳು-೪  ಸಮಯದ ಬೆಲೆ

ಗಾಂಧೀಜಿ ಸಮಯದ ಮೇಲಿರುವ ಅಲಕ್ಷ್ಯತನವನ್ನೆಂದೂ ಸಹಿಸಿರಲಿಲ್ಲ. ಒಮ್ಮೆ ಅವರು ಏನನ್ನೋ ಬರೆಯುವುದರಲ್ಲಿ ತಲ್ಲೀನರಾಗಿದ್ದರು. ತುಂಬ ಹೊತ್ತು ಬರೆಯುತ್ತಿದ್ದಂತೆ ಮಧ್ಯದಲ್ಲಿಯೇ, ಅಲ್ಲಿ ಕುಳಿತಿದ್ದ ಕಾಂತಿಲಾಲ್ ಹರಿಲಾಲ್ ಗಾಂಧಿಯವರೊಡನೆ ಗಂಟೆಯೆಷ್ಟಾಗಿದೆಯೆಂದು ಕೇಳಿದರು. ಅವರು ಕೈಗಡಿಯಾರವನ್ನು ನೋಡಿ, "ಐದು ಗಂಟೆಯಾಯಿತು" ಎಂದು ಹೇಳಿದರು.

ಕೂಡಲೇ ಗಾಂಧೀಜಿ ಬರೆಯುವುದನ್ನು ನಿಲ್ಲಿಸಿ", ಸರಿಯಾಗಿ ಐದು ಗಂಟೆಯಾಯಿತೇ" ಎಂದು ಕೇಳಿದರು. ಕಾಂತಿಲಾಲರು, "ಇನ್ನೂ ಒಂದು ನಿಮಿಷವಿದೆ" ಎಂದರು.

ಗಾಂಧೀಜಿಯ ಮುಖ ಅಸಮಾಧಾನದಿಂದ ಕೆರಳಿತು. ಅವರು, "ಏನಿದು ಕಾಂತಿ? ನಿನಗೆ ವೇಳೆಯ ಮಹತ್ವ ಕೊಂಚವೂ ತಿಳಿಯದೇ? ನೀನು ಕೈ ಗಡಿಯಾರ ಕಟ್ಟಿಕೊಂಡು ಉಪಯೋಗವೇನು? ಮೂವತ್ತು ಕೋಟಿ ನಿಮಿಷಗಳೆಂದರೆ ಎಷ್ಟು ದಿನ, ತಿಂಗಳು ಆಗುತ್ತದೆ ಹೇಳಬಲ್ಲೆಯಾ?" ಎಂದು ಕಠಿಣವಾಗಿ ಕೇಳಿದರು.

ಆಶ್ರಮವಾಸಿಗಳೂ ಅತಿಥಿಗಳೂ ಒಂದೇ ಪಂಕ್ತಿಯಲ್ಲಿ ನಿಶ್ಚಿತ ವೇಳೆಗೇ ಊಟಕ್ಕೆ ಕುಳಿತುಕೊಳ್ಳಬೇಕೆಂಬ ನಿಯಮವಿತ್ತು. ನಿಯಮ ಮೀರಿದವರಿಗೆ ಊಟವಿಲ್ಲ. ಗಾಂಧೀಜಿಯೂ ಈ ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸುತ್ತಿದ್ದರು.

ಒಮ್ಮೆ ಆಶ್ರಮಕ್ಕೆ ಇಬ್ಬರು ಅತಿಥಿಗಳು ಬಂದರು. 4 ದಿನ ಅವರು ಆಶ್ರಮದಲ್ಲೇ ಇದ್ದರು. ಕೊನೆಯ ದಿನ ಅವರು ಮಧ್ಯಾಹ್ನದ ಊಟದ ಹೊತ್ತಿನಲ್ಲೇ ಏನೋ ಚರ್ಚೆ ಮಾಡುತ್ತಾ ಕುಳಿತಿದ್ದರು. ಊಟದ ಗಂಟೆಯಾದುದು ಅವರಿಗೆ ಕೇಳಿಸಲೇ ಇಲ್ಲ.

ಅತಿಥಿಗಳು ಊಟಕ್ಕೆ ಎದ್ದು ಭೋಜನ ಶಾಲೆಯೆಡೆಗೆ ನಡೆದಾಗ ಕೆಲವರು ಊಟಮುಗಿಸಿ ಎದ್ದಿದ್ದರು. ಎದುರಿಗೇ ಬರುತ್ತಿದ್ದ ಗಾಂಧೀಜಿ ಇವರನ್ನು ಕಂಡು ನಸುನಗುತ್ತ, "ಈಗ ಎತ್ತ ಹೊರಟಿರಿ? ಊಟದ ಗಾಡಿಯು ಹೋಗಿ ಬಿಟ್ಟಿತು" ಎಂದರು.

ಅತಿಥಿಗಳು ತಲೆ ತಗ್ಗಿಸಿ, "ಕ್ಷಮಿಸಿ ಬಾಪೂ, ನಮಗೆ ನೆನಪೇ ಆಗಲಿಲ್ಲ" ಎಂದರು. ಆದರೆ ಶಿಸ್ತು, ನಿಯಮ ತಪ್ಪಿದವರಲ್ಲಿ ಬಾಪೂಜಿಗೆ ಕೊಂಚವೂ ಕನಿಕರ ಹುಟ್ಟಲಿಲ್ಲ. "ಚಿಂತಿಸದಿರಿ, ಇನ್ನೂ ಗಾಡಿ ಬರುವುದು ಸಂಜೆಗೇ. ಅಷ್ಟರವರೆಗೆ ನೀವು ಕಾಯಬೇಕಾಗುತ್ತೆ" ಎಂದರು.

ಅತಿಥಿಗಳಿಬ್ಬರೂ ಜೋಲು ಮೋರೆ ಹಾಕಿ ಕೊಂಡು ಹಿಂತಿರುಗಿದರು. ಅವರಿಗೆ ತಾಳಲಾರದ ಹಸಿವೆಯಾಗಿತ್ತು. ಅಷ್ಟರಲ್ಲಿ ಗಾಂಧೀಜಿ ಸ್ವತಃ ಒಂದು ಬಟ್ಟಲಲ್ಲಿ ಬಾಳೆಹಣ್ಣು ಮತ್ತು ಕಿತ್ತಳೆಹಣ್ಣು ಹಾಕಿ ತೆಗೆದುಕೊಂಡು ಬಂದು ಅವರಿಗೆ ತಿನ್ನಲು ಕೊಟ್ಟರು. ಗಾಂಧೀಜಿಯ ವಾತ್ಸಲ್ಯ ನೋಡಿ ಅವರ ಕಣ್ಣುಗಳು ಹಸಿಯಾದವು.